# ವಿವಾಹಿತರಿಗೆ ವಿಹಿತ ಉಪದೇಶ




ಶ್ರೀನಿವಾಸ ಸು. ಮಠದ

॥ ಶ್ರೀಃ ॥

# ವಿವಾಹಿತರಿಗೆ ವಿಹಿತ ಉಪದೇಶ

(ದೇವಪೂಜಾ, ವೈಶ್ವದೇವ, ಬಲಿಹರಣ, ಬ್ರಹ್ಮಯಜ್ಞ ಇತ್ಯಾದಿ
ಹಾಗೂ
ಸ್ತ್ರೀ ಜಪ ಕ್ರಮ ಸಹಿತ)


ಸಂಪಾದಕರು
ಶ್ರೀನಿವಾಸ ಸು. ಮಠದ, B.Sc; M.A.



ಗೀತಾ ಪ್ರಕಾಶನ, ವಿಜಾಪುರ
ದೂರವಾಣಿ : ೨೫೮೩೬೨

**VIVAHITARIGE VIHITA UPADESHA** : in Kannada by
Srinivas S. Mathad, B.Sc; M.A.
Srisha Nilaya,
Ajarekar Chal, Meenaxi Chowk, Bijapur -586101
Phone : 258362

First Edition : 2005

Second Edition : 2010



Pages : 140

Price : Rs. 30/- ($ 2 Dollars)

Copies : 1000

Publisher :

GEETA PRAKASHANA
Prop : Smt. Geeta S. Mathad
Ajarekar Chal, Meenaxi Chowk, Bijapur -586101
Phone : 258362

*Printers :*

M/s Manohar Printing Press
Old Dalal Street,
Market, Dharwad - 1
Phone : 2790030, 2741984

|| ಶ್ರೀಃ ||

ಶ್ರೀಗೋವಿಂದರಾಜೋ ವಿಜಯತೇ

# ಆಶೀರ್ವಚನ

ವಿವಾಹವು ಷೋಡಶ ಸಂಸ್ಕಾರಗಳಲ್ಲೊಂದಾಗಿದೆ. ವಿವಾಹವು ಸತ್‌ಸಂತಾನ ಅಭಿವೃದ್ಧಿಗೆ, ಮೋಕ್ಷಸಾಧನೆಗೆ ಎಡೆಮಾಡಿಕೊಡುತ್ತದೆ. ವಿವಾಹದ ನಂತರ ಗೃಹಸ್ಥಾಶ್ರಮಿಯಾದ ಬ್ರಾಹ್ಮಣನು ನಿತ್ಯದಲ್ಲಿ ಪಂಚಮಹಾಯಜ್ಞ ಪರನಾಗಿರಬೇಕು.

ಈ ಕಾರಣದಿಂದ ನಮ್ಮ ಪ್ರಿಯ ಶಿಷ್ಯ ಶ್ರೀನಿವಾಸ ಸು. ಮಠದ ಈತನು "ವಿವಾಹಿತರಿಗೆ ವಿಹಿತ ಉಪದೇಶ" ಎಂಬ ಗ್ರಂಥ ರಚನೆಮಾಡಿ ಅದರಲ್ಲಿ ವಿವಾಹದ ಕುರಿತಂತೆ ಎಲ್ಲ ವಿಷಯಗಳನ್ನು ಸಂಗ್ರಹಿಸಿರುವುದಲ್ಲದೇ, ವಿವಾಹದ ನಂತರ ಗೃಹಸ್ಥಾಶ್ರಮಿಯು ಮಾಡಲೇಬೇಕಾದ ಕರ್ತವ್ಯಗಳನ್ನು ಚೆನ್ನಾಗಿ ತಿಳಿಸಿಕೊಟ್ಟಿದ್ದಾನೆ. ಆ ಪ್ರಯುಕ್ತ ಈ ಗ್ರಂಥವು ಎಲ್ಲ ಸಜ್ಜನರಿಗೆ ಉಪಯುಕ್ತವಾಗಿದೆ. ಸಜ್ಜನರು ಇದರ ಸದುಪಯೋಗ ಮಾಡಿಕೊಂಡು ಭಗವಂತನ ಅನುಗ್ರಹಕ್ಕೆ ಪಾತ್ರರಾಗಬೇಕು.

ಇಂಥ ಕೃತಿ ರಚನೆ ಮಾಡಿದ ಶ್ರೀನಿವಾಸ ಸು. ಮಠದ ಈತನಿಗೆ ಭಗವಂತನು ಜ್ಞಾನ ಭಕ್ತಿ ವೈರಾಗ್ಯಾದಿಗಳನ್ನು ದಯಪಾಲಿಸಲಿ ಎಂಬುದಾಗಿ ಬಾದರಾಯಣಾಭಿನ್ನ ಶ್ರೀಗೋವಿಂದರಾಜರಲ್ಲಿ ಪ್ರಾರ್ಥಿಸುತ್ತೇವೆ.

ವಿಜಯಪುರ
೨೦-೧-೨೦೦೫

ಪಂ. ತ್ರಿವಿಕ್ರಮಾಚಾರ್ಯ ಉಮರ್ಜಿ

|| ಶ್ರೀಃ ||

# ಆಶೀರ್ವಚನ

ವಿವಾಹ ಸಂಸ್ಕಾರವನ್ನು ಹೊಂದಿದ ಬ್ರಾಹ್ಮಣನು "ಗೃಹಸ್ಥಾಶ್ರಮಿ" ಎನಿಸುತ್ತಾನೆ. ಧರ್ಮಾರ್ಥ ಕಾಮ ಮೋಕ್ಷಗಳೆಂಬ ಪುರುಷಾರ್ಥಗಳ ಸಂಪಾದನೆಗೆ ಈ ಗೃಹಸ್ಥಾಶ್ರಮವು ಹೆಬ್ಬಾಗಿಲಿನಂತೆ ಇದೆ. ಬ್ರಹ್ಮಚರ್ಯ, ವಾನಪ್ರಸ್ಥ, ಸನ್ಯಾಸ, ಆಶ್ರಮಗಳಲ್ಲಿದ್ದವರಿಗೆ ಧರ್ಮಕ್ಕೆ ಅನುಕೂಲ ಮಾಡಿಕೊಟ್ಟು ಅವರನ್ನು ರಕ್ಷಿಸುವದು ಗೃಹಸ್ಥಾಶ್ರಮಿಯ ಕರ್ತವ್ಯವಾಗಿದೆ. ಯೋಗ್ಯ ಸಂತಾನ ಅಭಿವೃದ್ಧಿಗೆ ಗೃಹಸ್ಥಾಶ್ರಮವು ಅನುಕೂಲಕರವಾಗಿದೆ.

ಇಂಥ ಗೃಹಸ್ಥಾಶ್ರಮಿಯು ಮಾಡಬೇಕಾದ ಕರ್ತವ್ಯಗಳೇನು ? ವಿವಾಹ ಸಂಸ್ಕಾರದ ಮಹತ್ವವೇನು ? ಇತ್ಯಾದಿ ವಿಷಯಗಳನ್ನು ನಮ್ಮ ಶಿಷ್ಯ ಶ್ರೀನಿವಾಸ ಸು. ಮಠದ ಇವರು "ವಿವಾಹಿತರಿಗೆ ವಿಹಿತ ಉಪದೇಶ" ಎಂಬ ಗ್ರಂಥ ಬರೆದು ವಿಶದವಾಗಿ ತಿಳಿಸಿಕೊಟ್ಟಿದ್ದಾರೆ. ಸಜ್ಜನರು ಇದನ್ನು ಸ್ವೀಕರಿಸಿ ಅದರಲ್ಲಿ ತಿಳಿಸಿದ ಪಂಚಮಹಾಯಜ್ಞಾದಿಗಳನ್ನು ಆಚರಿಸಿದಲ್ಲಿ ಭಗವಂತನು ಸುಪ್ರೀತನಾಗುವುದರಲ್ಲಿ ಸಂದೇಹವಿಲ್ಲ.

ಈ ಕೃತಿ ರಚಿಸಿದ ಶ್ರೀನಿವಾಸ ಸು. ಮಠದ ಇವರಿಂದ ಇನ್ನೂ ಅನೇಕ ಕೃತಿಗಳು ಹೊರಬರಲಿ ಎಂದು ಆಶಿಸುತ್ತೇವೆ.

ಧಾರವಾಡ
೨೬-೧-೨೦೦೫

**ಪಂ. ಕೃ. ಗೋ. ಕಲಕೋಟಿ**

|| ಶ್ರೀಃ ||

# ಶುಭಾಶಂಸನೆ

ವಿವಾಹವು ವೇದೋಕ್ತ ಷೋಡಶ ಸಂಸ್ಕಾರಗಳಲ್ಲಿ ಅತ್ಯಂತ ಪ್ರಮುಖ ಸಂಸ್ಕಾರವಾಗಿದೆ. ಇದು ಕೇವಲ ಸ್ತ್ರೀ ಪುರುಷರ ಭೌತಿಕ ಸುಖ ಸಂಬಂಧವಾಗಿರದೆ ಸುದೀರ್ಘ ದಾಂಪತ್ಯ ಜೀವನಕ್ಕೆ ಪವಿತ್ರಯಜ್ಞದ ಸ್ವರೂಪವನ್ನು ತಂದ ಶ್ರೌತ ಸಂವಿಧಾನವಾಗಿದೆ. ಇದರಲ್ಲಿ ಬರುವ ಪ್ರತಿಯೊಂದು ಮಂತ್ರ ತಂತ್ರ ವಿಧಾನಗಳು ಐಹಿಕ ಪಾರತ್ರಿಕ ಸುಖಪ್ರಾಪ್ತಿಯ ಉಪಾಯಗಳಾಗಿದ್ದು ವೈಜ್ಞಾನಿಕವಾಗಿಯೂ ಅರ್ಥಪೂರ್ಣವಾಗಿವೆ.

ಇಂಥ ಮಹತ್ವಪೂರ್ಣ ಸಂಸ್ಕಾರದ ಬಗ್ಗೆ ತಿಳಿವಳಿಕೆ ಮೂಡಿಸಲು ನಮ್ಮ ಆತ್ಮೀಯರಾದ ಶ್ರೀ ವೇ. ಶ್ರೀನಿವಾಸಾಚಾರ್ಯ ಮಠದ ಇವರು ತಮ್ಮದೇ ಆದ ಸರಳ ಶೈಲಿಯಲ್ಲಿ "ವಿವಾಹಿತರಿಗೆ ವಿಹಿತ ಉಪದೇಶ" ಎಂಬ ಈ ಹೊತ್ತಿಗೆಯನ್ನು ಪರಿಶ್ರಮಪೂರ್ವಕವಾಗಿ ರಚಿಸಿ ಹೊರತಂದಿದ್ದು ಎಲ್ಲರಿಗೂ ಅತ್ಯುಪಯುಕ್ತವಾಗಿದೆ. ವಿಶೇಷವಾಗಿ ವಿವಾಹವನ್ನು ಮಾಡಿಕೊಳ್ಳುವ ನವಯುವಕ, ಯುವತಿಯರಿಗೆ, ವಿವಾಹವನ್ನು ಮಾಡಿಸುವ ಹೊಸ ಪುರೋಹಿತರಿಗೆ ಹಾಗೂ ಜಿಜ್ಞಾಸುಗಳಿಗೆ ಪರಮೋಪಕಾರವಾಗಿದೆ.

ಈಗಾಗಲೇ ಅನೇಕ ಪತ್ರಿಕೆಗಳಲ್ಲಿ ತಮ್ಮ ಸರಳ ಶೈಲಿಯ ವಿವಿಧ ಉಪಯುಕ್ತ ಲೇಖನಗಳಿಂದ ಹಾಗೂ ಮೂವತ್ತಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ಬರೆದ ವಿವಿಧ ವಿಷಯಗಳನ್ನೊಳಗೊಂಡ ಪುಸ್ತಕ ಲೇಖನ, ಪ್ರಕಾಶನದಿಂದ ಕನ್ನಡ ವಾಚಕವೃಂದಕ್ಕೆ ಚಿರಪರಿಚಿತರಾದ ಶ್ರೀ ಶ್ರೀನಿವಾಸಾಚಾರ್ಯ ಮಠದರವರ ಈ ಪುಸ್ತಕವು ಇನ್ನಷ್ಟು ಉಪಕಾರಿಯಾಗಿದೆ. ಇದರಂತೆ ಇನ್ನೂ ಅನೇಕ ಉಪಯುಕ್ತ ಹೊತ್ತಿಗೆಗಳನ್ನು ಈ ಲೇಖಕರು ರಚಿಸಿ ಹೊರತರಲು ಭಗವಂತನು ಅವರಿಗೆ ಎಲ್ಲ ವಿಧ ಅನುಗ್ರಹವನ್ನು ಕರುಣಿಸಲೆಂದು ಇಚ್ಛಿಸಿ ಅಭಿನಂದಿಸುತ್ತೇನೆ.

ವಿಜಾಪುರ — **ಪಂ. ಮಧ್ವಾಚಾರ್ಯ ಮೊಖಾಶಿ**

೨೦-೧-೨೦೦೫

॥ ಶ್ರೀಃ ॥

# ಲೇಖಕರ ಮಾತು

ಶ್ರೀಹರಿಯ ಪ್ರೇರಣೆಯಿಂದ ಪ್ರಸ್ತುತ ಕೃತಿ- ''ವಿವಾಹಿತರಿಗೆ ವಿಹಿತ ಉಪದೇಶ''ದಲ್ಲಿ ವಿವಾಹ ಸಂಸ್ಕಾರ ಹೊಂದಿದ ಬ್ರಾಹ್ಮಣನು ತಿಳಿಯಬೇಕಾದ, ಮಾಡಬೇಕಾದ ಕರ್ತವ್ಯಗಳ ಕುರಿತಾದ ಕೆಲವು ಮಾತುಗಳನ್ನು ಸಂಗ್ರಹಿಸಿದ್ದೇನೆ. 'ವಿಹಿತ ಕರ್ಮವ ಮಾಡು' ಎಂಬ ಪುರಂದರದಾಸರ ವಾಣಿಯಂತೆ ಇಲ್ಲಿ ತಿಳಿಸಿದ ಸತ್ಕರ್ಮಗಳನ್ನು ಆಚರಿಸಬೇಕು.

ಪ್ರಸ್ತುತ ಗ್ರಂಥವನ್ನು ನನ್ನ ಕುಲಸ್ವಾಮಿಯಾದ ಶ್ರೀ ಶ್ರೀನಿವಾಸದೇವರ ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಿಸಿದ್ದೇನೆ.

ಗ್ರಂಥ ಸಂಪಾದನ ಕಾರ್ಯದಲ್ಲಿ ಮಾರ್ಗದರ್ಶನ ಮಾಡಿದ ನನ್ನ ವಿದ್ಯಾಗುರುಗಳಾದ ಶ್ರೀ ಪಂ. ತ್ರಿವಿಕ್ರಮಾಚಾರ್ಯ ಉಮರ್ಜಿ ಅವರಿಗೆ ನನ್ನ ಕೃತಜ್ಞತಾ ಪೂರ್ವಕ ನಮಸ್ಕಾರಗಳನ್ನು ಸಲ್ಲಿಸುತ್ತೇನೆ.

ಗ್ರಂಥ ಪ್ರಕಟನಾ ಕಾರ್ಯದಲ್ಲಿ ನೆರವಾದ ಸೂಕ್ತ ಸಲಹೆಗಳನ್ನಿತ್ತು ಉಪಕರಿಸಿದ ಶ್ರೀ ಪಂ. ಕೆ.ಜಿ. ಕಲಕೋಟಿ ಅವರಿಗೆ ನನ್ನ ನಮಸ್ಕಾರಗಳು.

ಈ ಗ್ರಂಥ ರಚನೆ ಕುರಿತಂತೆ ನನ್ನನ್ನು ಅಭಿನಂದಿಸಿದ ಶ್ರೀ ಪಂ. ಮೊಖಾಶಿ ಮಧ್ವಾಚಾರ್ಯ ಇವರಿಗೆ ನನ್ನ ನಮಸ್ಕಾರಗಳು.

ಪ್ರಸ್ತುತ ಗ್ರಂಥದ ಪ್ರೂಫ್ ತಿದ್ದುವ ಕಾರ್ಯದಲ್ಲಿ ಸಹಾಯ ಮಾಡಿದ ಸ್ನೇಹಿತ ವಿನೋದ ಕಟ್ಟಿ, ತಮ್ಮ ಚಿ. ವಾದಿರಾಜ ಮಠದ, ಅಳಿಯಂದಿರಾದ ಶ್ರೀ ರಾಘವೇಂದ್ರ ಅಡಬಡ್ಡಿ ಮತ್ತು ನನ್ನ ಸುಪುತ್ರ ಚಿ. ಆನಂದತೀರ್ಥ ಇವರಿಗೆ ಭಗವಂತನು ಜ್ಞಾನಭಕ್ತ್ಯಾದಿಗಳನ್ನು ದಯಪಾಲಿಸಲಿ.

ಸಕಾಲದಲ್ಲಿ ಈ ಗ್ರಂಥವನ್ನು ಅಂದವಾಗಿ ಮುದ್ರಣಮಾಡಿಕೊಟ್ಟ ಮೆ॥ ಮನೋಹರ ಮುದ್ರಣಾಲಯ ಧಾರವಾಡ ಇವರಿಗೆ ಧನ್ಯವಾದಗಳು.

ಶ್ರೀ ಹರಿಯ ಪಾದಕಮಲಗಳಲ್ಲಿ ಭಕ್ತಿಯು ಅಭಿವೃದ್ಧಿಯಾಗಲೆಂದು ಅಪೇಕ್ಷಿಸಿ ಈ ಗ್ರಂಥ ರಚನೆ ಮಾಡಿದ್ದೇನೆ. ಶ್ರೀಹರಿಯು ಸುಪ್ರೀತನಾಗಲಿ.

ವಿಜಾಪುರ — ಇತಿ ಸಜ್ಜನ ಸೇವಕ

೨೦-೧-೨೦೦೫ — **ಶ್ರೀನಿವಾಸ ಸು. ಮಠದ**

# ವಿಷಯಾನುಕ್ರಮಣಿಕಾ

# ವಿವಾಹ - ಒಂದು ಚಿಂತನೆ

ನಮ್ಮ ಭಾರತೀಯ ಪರಂಪರೆಯಲ್ಲಿ 'ವಿವಾಹ' ಸಂಸ್ಕಾರಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ವಿವಾಹವು ಸುಖಸಂಸಾರಕ್ಕೆ ಮೂಲಕಾರಣವೂ, ಉತ್ತಮ ಪ್ರಜಾಸಂಪಾದನೆಯ ಮೂಲವೂ, ಮತ್ತು ಗೃಹಸ್ಥಾಶ್ರಮದ ಮಹಾದ್ವಾರವೂ ಆಗಿದೆ.

ವಿವಾಹವು ಕೇವಲ ಗಂಡು ಹೆಣ್ಣುಗಳ ಮಿಲನವಲ್ಲ. ಇದು ಕುಟುಂಬಗಳ ಮಿಲನ. ಸಮಷ್ಟಿ ಹಿತಕ್ಕೆ ಪೂರಕ. ಹೀಗಾಗಿ ನಮ್ಮಲ್ಲಿ ವಿವಾಹಕ್ಕೆ ತುಂಬಾ ಮಹತ್ವ ಉಂಟು. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳನ್ನು ಸಾಧಿಸಲು ಪತಿ-ಪತ್ನಿಯರು ಪಣತೊಟ್ಟು ಒಂದಾಗಿ ಬೆರೆತು ತಮ್ಮ ಜೀವಿತದ ಅವಧಿಯಲ್ಲಿ ಸಾಧನೆಗೆ ಎಡೆಮಾಡಿಕೊಡುವುದು ಈ ವಿವಾಹ ಸಂಸ್ಕಾರ.

'ದಾಂಪತ್ಯ ಜೀವನಕ್ಕೆ ಸ್ಥಿರತೆ, ಮಾನ್ಯತೆ, ಅಬಾಧ್ಯತೆ, ಅಭೇದ್ಯತೆಗಳನ್ನು ತಂದುಕೊಡುವುದು 'ವಿವಾಹ' ಸಂಸ್ಕಾರ. ಈ ಸಂಸ್ಕಾರವಿಲ್ಲದಿದ್ದಲ್ಲಿ ಮಾನವರು ಪಶುಗಳಂತೆ ಬಾಳಬೇಕಾಗುತ್ತಿತ್ತು. ಮಾನವರಲ್ಲಿ ಸ್ತ್ರೀ ಪುರುಷರ ಸಾಹಚರ್ಯವನ್ನು ಕ್ಷಣಿಕವಾಗಿಡದೇ ಸ್ಥಾಯೀಭಾವವನ್ನು ಉಳಿಸಿ ಬೆಳೆಸುವುದೇ ವಿವಾಹಸಂಸ್ಕಾರದ ಉದ್ದೇಶವೆಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

ಈ ವಿವಾಹ ವಿಧಿಯಿಂದ ಪಾಣಿಗ್ರಹಣಮಾಡಿಕೊಂಡ ಪುರುಷರಿಗೆ ಸಾಮಾಜಿಕ ಜವಾಬ್ದಾರಿಯೂ ಉಂಟು. ಅವರು ಧರ್ಮಾದಿ ಪುರುಷಾರ್ಥಗಳನ್ನು ಸಾಧಿಸಿಕೊಳ್ಳುವುದಲ್ಲದೇ ದೇವಋಣ, ಋಷಿಋಣ, ಪಿತೃಋಣಗಳೆಂಬ ಮೂರು ಋಣಗಳನ್ನು ತೀರಿಸುವ ಹೊಣೆಗಾರಿಕೆ ಉಂಟು. ಹೋಮ, ಯಜ್ಞಾದಿಗಳಿಂದ ದೇವಋಣವನ್ನು, ಬ್ರಹ್ಮಚರ್ಯದಿಂದ (ಪಾಠಪ್ರವಚನಗಳಿಂದ) ಋಷಿ ಋಣವನ್ನು, ಪ್ರಜಾಸೃಷ್ಟಿಯಿಂದ ಪಿತೃಋಣವನ್ನು ತೀರಿಸಬೇಕು.[೧]

ಪಾಣಿಗ್ರಹಣಕಾಲದಲ್ಲಿ ಭಾಗ್ಯಶಾಲಿಯೇ, ದೀರ್ಘಕಾಲ ಬಾಳುವದಕ್ಕೋಸ್ಕರ ಭಗ, ಅರ್ಯಮಾ, ಸವಿತಾ, ಪೂಷಾ ಎಂಬ ನಾಲ್ಕು ದೇವತೆಗಳು ಗೃಹಸ್ಥಾಶ್ರಮ ಪಾಲನೆಗೋಸ್ಕರ ನಿನ್ನನ್ನು ನನ್ನ ಅಧೀನಮಾಡಿರುವರು ಎಂದು ಹೇಳಿ ವಧುವಿನ

---

೧) ಜಾಯಮಾನೋ ವೈ ಬ್ರಾಹ್ಮಣಸ್ತ್ರಿಭಿರ್ಋಣೀ ವಾ ಜಾಯತೇ ।
ಬ್ರಹ್ಮಚರ್ಯೇಣ ಋಷಿಭ್ಯೋ ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯಃ ॥
(ಶ್ರುತಿವಾಕ್ಯ)

ಬಲಗೈಯನ್ನು ವರನು ಹಿಡಿಯುತ್ತಾನೆ.[೨] ಈ ಮಾತು ವಿವಾಹದ ಭದ್ರವಾದ ಬೆಸುಗೆಗೆ ಸಾಕ್ಷಿಯಾಗಿ ನಿಲ್ಲುತ್ತದೆ.

ಈ ವಿವಾಹ ಸಂಸ್ಕಾರವನ್ನು ಅರ್ಥಮಾಡಿಕೊಂಡವರಿಗೆ ಬದುಕು ಒಂದು ಉನ್ನತವಾದ ಸಾಧನಕ್ಷೇತ್ರವೆನಿಸುತ್ತದೆ. ಸಹಚಾರಿಣಿಯಾದ ಸತಿ ಸ್ನೇಹಮಯಿಯಾಗಿರುತ್ತಾಳೆ.

ಧರ್ಮ, ಅರ್ಥ, ಕಾಮದ ವಿಷಯಗಳಲ್ಲಿ ಒಬ್ಬರನ್ನೊಬ್ಬರು ಅರಿತುಕೊಂಡು ಸಹಭಾಗಿಗಳಾಗಿ ನಡೆದು ಕರ್ತವ್ಯವನ್ನು ಪೂರೈಸುವ ಹೊಣೆಯನ್ನು ವಿವಾಹವು ವಿಧಿಸಿರುವುದನ್ನು ನೋಡಿದಾಗ ಈ ಸಂಸ್ಕಾರವು ಅರ್ಥಪೂರ್ಣವೆನಿಸುತ್ತದೆ.[೩]

ವಿವಾಹ ಸಂಪ್ರದಾಯವು ಪ್ರೇಮದ ಅಭಿವ್ಯಕ್ತಿಗೆ, ಬೆಳವಣಿಗೆಗೆ ಸಾಧನವೂ ಹೌದು, ಅದು ಸಂಪ್ರದಾಯ ಮಾತ್ರವಲ್ಲ. ಸಮಾಜದ ಅಂತರ್ಗತ ನಿಯಮವೂ ಕೂಡ ಆಗಿದೆ. ವಿವಾಹವು ಫಲಕಾರಿಯಾಗುವುದೇ ? ಎಂದು ಯಾರೂ ಸಂದೇಹಪಡುವದಿಲ್ಲ. ಯಾಕೆಂದರೆ ಅದಕ್ಕೆ ಅದರದ್ದೇ ಆದ ವಿಶಿಷ್ಟ ಸ್ಥಾನಮಾನ ನಮ್ಮ ಸಮಾಜದಲ್ಲಿದೆ. ನಾವು ಅದನ್ನು ಗೌರವಿಸುವುದು ನಮ್ಮ ಸನಾತನ ಪರಂಪರೆಯನ್ನು ಗೌರವಿಸಿದಂತೆಯೇ ಸರಿ.

ವಿವಾಹ ವ್ಯವಸ್ಥೆಯಲ್ಲಿ ಹೆಣ್ಣು ಒಂದು ವಸ್ತುವಲ್ಲ, ಪ್ರಾಣಿಯಲ್ಲ, ತನ್ನದೇ ಆದ ವ್ಯಕ್ತಿತ್ವವುಳ್ಳ ಒಬ್ಬ ಜೀವಿ ಎಂಬ ಭಾವನೆ ಬೆಳೆದು ಬಂದಾಗ 'ವಿವಾಹ' ಸಂಸ್ಕಾರ ಅರ್ಥಪೂರ್ಣವಾಗುತ್ತದೆ.

'ವಿವಾಹವೆಂಬುದು ಸ್ತ್ರೀಪುರುಷರ ಲೈಂಗಿಕ ತೃಪ್ತಿಗಿರುವ ಒಂದು ವ್ಯವಸ್ಥಿತ ಕ್ರಮ' ಎಂಬ ಕ್ಯಾಂಟನ ಮಾತನ್ನು ಡಾ. ರಾಧಾಕೃಷ್ಣನ್ ಒಪ್ಪುವದಿಲ್ಲ, ಬದಲು ಹೀಗೆ ಹೇಳುತ್ತಾರೆ- "ಹಾಗಿದ್ದ ಮೇಲೆ ಕಾಮದಾಹ (ಲೈಂಗಿಕತೃಪ್ತಿ) ಮುಗಿದ ಮೇಲೆ ವಿವಾಹ ಮುರಿದು ಬೀಳಬೇಕಿತ್ತು. ಹಾಗೆ ಕಾಮದ ಪರಿಣಾಮವಾಗಿ ಸ್ನೇಹ, ಪ್ರೇಮ, ವಾತ್ಸಲ್ಯಗಳು ಬೆಳೆಯುತ್ತವೆ. ಈ ಅಂಶಗಳ ಅಭಾವವಿರುವ ಆಧುನಿಕ ಸಮಾಜದ ಲೈಂಗಿಕ ಜೀವನ ಅಸಭ್ಯವಾಗಿ ಕಾಣುತ್ತದೆ".

ವಿವಾಹ, ಸಾಂಪ್ರದಾಯಿಕ ಸಂಸ್ಕಾರಕ್ಕೆ ಸಹಕಾರಿಯಾದ ಸಾಮಾಜಿಕ ವ್ಯವಸ್ಥೆಯೇ ಹೊರತು ಭೋಗದ ರಹದಾರಿಯಲ್ಲ. ಮಕ್ಕಳಿಂದ ಪತಿ ಪತ್ನಿಯರ ಬಾಂಧವ್ಯ ನಿಕಟಗೊಳ್ಳುತ್ತದೆ.

---

೨) ಗೃಭ್ಣಾಮಿ ತೇ ಸೌಭಗತ್ವಾಯ ಹಸ್ತಂ ಮಯಾ ಪತ್ಯಾ ಜರದಷ್ಟಿರ್ಯಥಾಸಃ ।
ಭಗೋ ಅರ್ಯಮಾ ಸವಿತಾ ಪುರಂಧಿರ್ಮಹ್ಯಂ ತ್ವಾದುರ್ಗಾರ್ಹಪತ್ಯಾಯ ದೇವಾಃ॥
(ಋಗ್ವೇದ)

೩) ಧರ್ಮೇ ಚ ಅರ್ಥೇ ಚ ಕಾಮೇ ಚ ನಾತಿಚರಾಮಿ ನಾತಿಚರಾಮಿ ನಾತಿಚರಾಮಿ ॥
(ವಿವಾಹ ಪ್ರಯೋಗ)

ಇನ್ನು 'ವಿವಾಹ' ಶಬ್ದದ ಅರ್ಥವನ್ನು ವಿಚಾರಿಸೋಣ. ವಿಶಿಷ್ಟ ರೀತಿಯಲ್ಲಿ ಕನ್ಯೆಯನ್ನು ಸ್ವೀಕರಿಸುವ, ಹೊಂದುವ ಕ್ರಿಯೆಗೆ ವಿವಾಹವೆಂದು ಕರೆಯುತ್ತಾರೆ.[೪]

ವಿವಾಹಕ್ಕೆ ಲಗ್ನ, ಕಲ್ಯಾಣ, ಉದ್ವಾಹ, ಪರಿಣಯ ಇತ್ಯಾದಿ ಪರ್ಯಾಯವಾಚಕ ಹೆಸರುಗಳೂ ಉಂಟು.

ಲಗ್ನವೆಂದರೆ ಸಿಕ್ಕಿಹಾಕಿಕೊಳ್ಳುವದು, ಗಂಟುಬೀಳುವುದು ಎಂದರ್ಥವು.[೫] ವಧೂವರರು ಒಂಟಿಯಾಗಿ ಇರುವುದನ್ನು ತೊರೆದು ಒಬ್ಬರ ಪ್ರೇಮದಲ್ಲಿ ಇನ್ನೊಬ್ಬರು ಸಿಕ್ಕಿಬೀಳುವದು, ಎಡೆಬಿಡದ ಗಂಟು ಬಾಂಧವ್ಯದಲ್ಲಿ ಸೆರೆಯಾಗುವದು ಎಂಬ ಅರ್ಥದಲ್ಲಿ ಲಗ್ನ ಶಬ್ದವನ್ನು ಬಳಸಲಾಗುತ್ತಿದೆ.

ಕಲ್ಯಾಣ ಎಂದರೆ ಮಂಗಳ ಎಂದರ್ಥ.[೬] ಜೀವನ ಸಂಗಾತಿಯನ್ನು ಪಡೆದುಕೊಂಡು ಜೀವನವನ್ನು ಮಂಗಲಮಯವನ್ನಾಗಿ ಮಾಡಿಕೊಳ್ಳುವುದರಿಂದ ಇದಕ್ಕೆ ಕಲ್ಯಾಣವೆಂದು ಕರೆಯುವದುಂಟು.

ಉದ್ವಾಹ ಎಂದರೆ ಮೋಕ್ಷಾದಿ ಪುರುಷಾರ್ಥಗಳಿಗಾಗಿ ಗೃಹಸ್ಥಾಶ್ರಮವನ್ನು ಸ್ವೀಕರಿಸುವದು ಹೊಂದುವದು ಎಂದರ್ಥ.[೭]

ಪರಿಣಯ ಎಂದರೆ ಚೆನ್ನಾಗಿ ಶಾಸ್ತ್ರೋಕ್ತವಾಗಿ ಕನ್ಯೆಯನ್ನು ಹೊಂದುವದು ಅಥವಾ ಸ್ವೀಕರಿಸುವದು.[೮]

ಇಂಥ ಪವಿತ್ರವಾದ ವಿವಾಹ ಸಂಸ್ಕಾರವನ್ನು ಶಾಸ್ತ್ರೋಕ್ತರೀತಿಯಲ್ಲಿ ಹೊಂದಿ ಧರ್ಮಾರ್ಥ ಕಾಮಮೋಕ್ಷಗಳೆಂಬ ಪುರುಷಾರ್ಥಗಳನ್ನು ಹೊಂದಬೇಕು.



---

೪) ವಹ (ಪ್ರಾಪಣೇ) ವಿ+ವಹ=ಘಂಯ್) ವಿಶಿಷ್ಟ ವಹನಮ್

೫) ಲಗೇ (ಸಂಗೇ) ಇನ್ನೊಬ್ಬರ ಸಂಗದಲ್ಲಿ ಸಿಕ್ಕಿಬೀಳುವದು

೬) ಕಲ್ಯೇ ಪ್ರಾತಃಕಾಲೇ ಅಣ್ಯತೇ - ಅಣ (ಶಬ್ದೇ) ಘಂಯ್
ಸಂತೋಷ್ಟೋ ಭಾರ್ಯಯಾ ಭರ್ತಾ ಭರ್ತ್ರಾ ಭಾರ್ಯಾ ತಥೈವ ಚ ।
ಯಸ್ಮಿನ್ನೇವ ಕುಲೇ ನಿತ್ಯಂ ಕಲ್ಯಾಣಂ ತತ್ರ ವೈ ಧ್ರುವಮ್ ॥
ಮನುಸ್ಮೃತಿ (೩-೬೦)

ಕಲ್ಯಾಣಂ ಮಂಗಲಂ ಶುಭಂ (ಕೋಶ)

೭) ಉದ್+ವಹ (ಪ್ರಾಪಣೇ) ಘಂಯ್

೮) ಪರಿ+ಣೇಯ್ (ಪ್ರಾಪಣೇ) ಭಾವೇ ಅಚ್

# ಗೃಹಸ್ಥಾಶ್ರಮ ಶ್ರೇಷ್ಠ ಏಕೆ ?

ಉಪನಯನವಾದನಂತರ ಬ್ರಾಹ್ಮಣನು ಗುರುಶುಶ್ರೂಷೆಯಲ್ಲಿ ತತ್ಪರನಾಗಿದ್ದು ಎಲ್ಲ ವೇದಗಳನ್ನು, ಶಾಸ್ತ್ರಗಳನ್ನು ಅಧ್ಯಯನ ಮಾಡಿ ಗುರುವಿಗೆ ಗುರುದಕ್ಷಿಣೆಯನ್ನು ಕೊಟ್ಟು ಆಚಾರ್ಯರ ಅನುಮತಿಯನ್ನು ಪಡೆದುಕೊಂಡು ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸಗಳೆಂಬ ನಾಲ್ಕು ಆಶ್ರಮಗಳಲ್ಲಿ ಯಾವುದಾದರೂ ಒಂದು ಆಶ್ರಮವನ್ನು ಹೊಂದಿ ಶಾಸ್ತ್ರೋಕ್ತವಾದ ರೀತಿಯಲ್ಲಿ ಜೀವನವನ್ನು ನಡೆಸಬೇಕು.[೧]

ಇಚ್ಛೆಯಿರುವುದಾದರೆ ಕನ್ಯೆಯನ್ನು ಶಾಸ್ತ್ರೋಕ್ತವಿಧಿಯಿಂದ ಪಾಣಿಗ್ರಹಣ ಮಾಡಿಕೊಂಡು ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಸಂತಾನವನ್ನು ಪಡೆದುಕೊಳ್ಳಬೇಕು. ಅಥವಾ ಬ್ರಹ್ಮಚರ್ಯವ್ರತವನ್ನೇ ಮುಂದುವರಿಸಿ ಗುರುಸಾನಿಧ್ಯದಲ್ಲಿ ಜೀವನಪರ್ಯಂತವಾಗಿ ಬ್ರಹ್ಮಚಾರಿಯಾಗಿರಬೇಕು. ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ಅರಣ್ಯಕ್ಕೆ ಹೋಗಬೇಕು. ಅಥವಾ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಯತಿಧರ್ಮಗಳನ್ನು ಆಚರಿಸುತ್ತ ಇರಬೇಕು.[೨]

ಇವುಗಳಲ್ಲಿ ಗೃಹಸ್ಥಾಶ್ರಮವೇ ಎಲ್ಲ ಧರ್ಮಗಳಿಗೂ ಮೂಲಭೂತವಾದುದೆಂದು ಹೇಳುತ್ತಾರೆ. ಗೃಹಸ್ಥಾಶ್ರಮದಲ್ಲಿದ್ದು ಅಂತಃಕರಣ ಶುದ್ಧವಾದನಂತರ ಜಿತೇಂದ್ರಿಯನಾದ ಗೃಹಸ್ಥನು ಸರ್ವತ್ರ ಸಿದ್ಧಿಯನ್ನು ಪಡೆಯುತ್ತಾನೆ. ಅಂದರೆ ಗೃಹಸ್ಥನು ಸಂತಾನವನ್ನು ಪಡೆದು ಪಿತೃಋಣದಿಂದಲೂ, ವೇದಗಳ ಅಧ್ಯಯನ ಮಾಡಿ ಋಷಿ ಋಣದಿಂದಲೂ, ಯಜ್ಞಗಳನ್ನು ಮಾಡಿ ದೇವ ಋಣದಿಂದಲೂ

---

೧) ಆಚಾರ್ಯೇಣಾಭ್ಯನುಜ್ಞಾತಶ್ಚತುರ್ಣಾಮೇಕಮಾಶ್ರಯಮ್ ।
ಆ ವಿಮೋಕ್ಷಾತ್ ಶರೀರಸ್ಯ ಸೋಽವತಿಷ್ಠೇದ್ಯಥಾವಿಧಿ ॥
(ಶ್ರೀಮನ್ ಮಹಾಭಾರತ ಶಾಂತಿಪರ್ವ)

೨) ಪ್ರಜಾಸರ್ಗೇಣ ದಾರೈಶ್ಚ ಬ್ರಹ್ಮಚರ್ಯೇಣ ವಾ ಪುನಃ ।
ವನೇಗುರುಸಕಾಶೇ ವಾ ಯತಿಧರ್ಮೇಣ ವಾ ಪುನಃ ॥
(ಶ್ರೀಮನ್ ಮಹಾಭಾರತ ಶಾಂತಿಪರ್ವ)

ಮುಕ್ತನಾಗುತ್ತಾನೆ. ಹೀಗೆ ಮೂರು ಋಣಗಳಿಂದ ಮುಕ್ತನಾಗಿ ವಿಹಿತಕರ್ಮಗಳನ್ನು ಆಚರಿಸಿ ಪರಿಶುದ್ಧನಾಗುತ್ತಾನೆ.[೩]

ಮೇಲೆ ತಿಳಿಸಿದ ನಾಲ್ಕು ಆಶ್ರಮಗಳಲ್ಲಿ ಗೃಹಸ್ಥಾಶ್ರಮವೇ ಶ್ರೇಷ್ಠವಾದದ್ದು. ಅದು ಹೇಗೆ ? ಎಂಬುದನ್ನು ಶ್ರೀಮನ್ ಮಹಾಭಾರತ ಶಾಂತಿಪರ್ವದಲ್ಲಿ ತಿಳಿಸಿಕೊಟ್ಟಿದ್ದಾರೆ.

ಒಮ್ಮೆ ವಿದ್ವಾಂಸರೆಲ್ಲರೂ ಸೇರಿ ನಾಲ್ಕೂ ಆಶ್ರಮಗಳ ವೈಶಿಷ್ಟ್ಯವನ್ನು ತಿಳಿಯಲು ತಕ್ಕಡಿಯ ಒಂದು ತಟ್ಟೆಯಲ್ಲಿ ಗೃಹಸ್ಥಾಶ್ರಮದ ವೈಶಿಷ್ಟ್ಯವನ್ನು ಮತ್ತೊಂದು ತಟ್ಟೆಯಲ್ಲಿ ಬ್ರಹ್ಮಚರ್ಯ, ವಾನಪ್ರಸ್ಥ, ಸಂನ್ಯಾಸ ಈ ಮೂರೂ ಆಶ್ರಮಗಳ ವೈಶಿಷ್ಟ್ಯವನ್ನು ಜೊತೆಗೂಡಿಸಿ ಇಟ್ಟರಂತೆ. ಹೀಗೆ ವಿವೇಕವೆಂಬ ತಕ್ಕಡಿಯ ತಟ್ಟೆಗಳಲ್ಲಿ ಇಟ್ಟು ತೂಗಿದ ನಂತರ ಗೃಹಸ್ಥಾಶ್ರಮವೇ ಅತಿ ಶ್ರೇಷ್ಠವೆಂದು ಸಿದ್ಧವಾಯಿತಂತೆ. ಇದಕ್ಕೆ ಕಾರಣ ಹೀಗಿದೆ-

ಗೃಹಸ್ಥಾಶ್ರಮದ ಮೂಲಕವಾಗಿ ಇಹದಲ್ಲಿ ಕಾಮೋಪಭೋಗಗಳನ್ನು ಅನುಭವಿಸಿ ಅವಸಾನಾನಂತರದಲ್ಲಿ ಶ್ರೇಷ್ಠವಾದ ಲೋಕಗಳನ್ನು ಕೂಡ ಹೊಂದಬಹುದಾಗಿದೆ- ಗೃಹಸ್ಥಾಶ್ರಮದಲ್ಲಿದ್ದು ವೇದೋಕ್ತವಾದ ಕರ್ಮಗಳನ್ನು ಮಾಡುವುದೇ ಯೋಗ್ಯವೆಂದು ಭಾವಿಸಿ ಫಲೇಚ್ಛೆಯನ್ನು ಬಿಟ್ಟು ಯಾವನು ವೈದಿಕ ಕರ್ಮಗಳನ್ನು ಆಚರಿಸುವನೋ ಅವನು 'ತ್ಯಾಗೀ' ಎಂದು ಕರೆಯಲ್ಪಡುತ್ತಾನೆ.[೪]

ಧರ್ಮದ ಸೋಗಿನಿಂದ ಅರಣ್ಯದಲ್ಲಿ ವಾಸಮಾಡುತ್ತಿರುವ ಮನುಷ್ಯನು ಕಾಲ ಕರ್ಮಸಂಯೋಗದಿಂದ ಕಾಮಭೋಗದ ಕಡೆಗೆ ದೃಷ್ಟಿಹಾಯಿಸಿದ್ದೇ ಆದರೆ ಯಮಧರ್ಮನು ಒಡನೆಯೇ ಅವನ ಕಂಠವನ್ನು ಪಾಶದಿಂದ ಬಿಗಿಯುತ್ತಾನೆ. ಅಂದರೆ ಸಂನ್ಯಾಸ ಧರ್ಮದಲ್ಲಿರುವವನ ಮನಸ್ಸು ಪಕ್ವವಾಗದೇ ಕಾಮಾಸಕ್ತವಾಗಿಬಿಟ್ಟರೆ ಅವನು ಪತಿತನಾಗುವುದರಲ್ಲಿ ಸಂದೇಹವಿಲ್ಲ.

ಈ ಗೃಹಸ್ಥಾಶ್ರಮದಲ್ಲಿ ಪಿತೃಗಳ, ದೇವತೆಗಳ, ಹಾಗೂ ಅತಿಥಿಗಳ ಪೂಜಾಕಾರ್ಯಗಳು ಸಮಾವೇಶವಾಗುವುದರಿಂದ ಇದು ಪ್ರಶಂಸೆಗೆ ಪಾತ್ರವಾಗಿದೆ. ಈ ಗೃಹಸ್ಥಾಶ್ರಮದಲ್ಲಿಯೇ ಧರ್ಮಾರ್ಥ ಕಾಮಗಳೆಂಬ ತ್ರಿವರ್ಗದ ಸಿದ್ಧಿಯಾಗುತ್ತದೆ.

---

೩) ಗೃಹಸ್ಥಸ್ತ್ವೇಷ ಧರ್ಮಾಣಾಂ ಸರ್ವೇಷಾಂ ಮೂಲಮುಚ್ಯತೇ ।
ಯತ್ರ ಪಕ್ವಕಷಾಯೋ ಹಿ ದಾಂತಃ ಸರ್ವತ್ರ ಸಿದ್ಧ್ಯತಿ ।
ಪ್ರಜಾವಾನ್ ಶ್ರೋತ್ರಿಯೋ ಯಜ್ವಾ ಮುಕ್ತ ಏವ ಋಣೈಸ್ತ್ರಿಭಿಃ ।
ಅಥ ಅನ್ಯಾನಾಶ್ರಮಾನ್ ಪಶ್ಚಾತ್ ಪೂತೋ ಗಚ್ಛೇತ ಕರ್ಮಭಿಃ ॥
(ಶ್ರೀಮನ್ ಮಹಾಭಾರತ ಶಾಂತಿಪರ್ವ)

೪) ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ॥ (ಭಗವದ್ಗೀತಾ)(೧೮-೧೧)

ಇಂತಹ ಪರಮಶ್ರೇಷ್ಠವಾದ ಗಾರ್ಹಸ್ಥಧರ್ಮವನ್ನು ಹೊಂದಿದ ಗೃಹಸ್ಥರು ಪಶು, ಧನ, ಧಾನ್ಯ ಸಮೃದ್ಧಿಯನ್ನು ಹೊಂದಿ ವಿಧಿಪೂರ್ವಕ ಪಂಚಮಹಾಯಜ್ಞಗಳನ್ನು ಮಾಡದಿದ್ದರೆ ಅವರಲ್ಲಿ ಪಾಪವು ಶಾಶ್ವತವಾಗಿ ಉಳಿಯುತ್ತದೆ.

ಇದನ್ನರಿತವರಾಗಿ ಪ್ರತಿಯೊಬ್ಬ ಬ್ರಾಹ್ಮಣನು ಗೃಹಸ್ಥಾಶ್ರಮದಲ್ಲಿದ್ದುಕೊಂಡು ವೇದ ವಿಹಿತವಾದ ಕರ್ಮಗಳನ್ನು ಫಲಾಪೇಕ್ಷೆ ಇಲ್ಲದೇ ಮಾಡುತ್ತ ವಿನಯಶೀಲರಾಗಿದ್ದಲ್ಲಿ ಅಂಥವರಿಗೆ ಮೋಕ್ಷವು ಕೂಡ ಜ್ಞಾನದ್ವಾರಾ ಲಭಿಸುವುದರಲ್ಲಿ ಸಂದೇಹವಿಲ್ಲ; ಅಂತೆಯೇ 'ಧನ್ಯೋ ಗೃಹಸ್ಥಾಶ್ರಮಃ' ಎಂಬ ಲೋಕೋಕ್ತಿಯು ರೂಢಿಯಲ್ಲಿ ಬಂದಿದೆ.

– ⊙ –

# ಪುರುಷನಿಗೆ ವಿವಾಹ ಅವಶ್ಯವೇ ? ಒಂದು ಉಪಾಖ್ಯಾನ

ಹಿಂದೆ ಜರತ್ಕಾರು ಎಂಬ ಮಹಾತಪಸ್ವಿಯಾದ ಬ್ರಾಹ್ಮಣನಿದ್ದನು. ಅವನು ಯಾವಾಗಲೂ ಪುಣ್ಯತೀರ್ಥಗಳಲ್ಲಿ ಸ್ನಾನಮಾಡುತ್ತ ಸಂಚರಿಸುತ್ತಿದ್ದನು. ಹೀಗೆ ಸಂಚಾರಮಾಡುತ್ತಿರುವಾಗ ಒಂದು ಹಳ್ಳದ ಬದಿಯಲ್ಲಿದ್ದ ಲಾಮಂಚದ ಪೊದೆಯಲ್ಲಿ ತಲೆಕೆಳಗಾಗಿ ಜೋತುಬಿದ್ದಿದ್ದ ಪಿತೃಗಳನ್ನು ನೋಡಿದನು. ಜೋತು ಬೀಳಲು ಸಾಧನವಾಗಿದ್ದ ಪೊದೆಯ ಬೇರನ್ನು ಹತ್ತಿರದ ಬಿಲದಲ್ಲಿದ್ದ ಇಲಿಯೊಂದು ಕಡಿದುಹಾಕುತ್ತಿದ್ದಿತು. ಬೇರಿನ ಒಂದೇ ಒಂದು ತಂತುವು ಮಾತ್ರ ಉಳಿದಿದ್ದು ಪಿತೃಗಳು ಆ ತಂತುವನ್ನೇ ಅವಲಂಬಿಸಿ ಜೋತಾಡುತ್ತಿದ್ದರು. ಬಹಳ ಕಾಲದವರೆಗೆ ಮದುವೆಯಾಗದೇ ಸಂಚರಿಸುತ್ತಿದ್ದ ಜರತ್ಕಾರುವು ಅವರನ್ನು ನೋಡಿ ಸಮೀಪಕ್ಕೆ ಹೋಗಿ ದಯಾರ್ದ್ರ ಹೃದಯನಾಗಿ ಅವರಿಗೆ ಪ್ರಶ್ನೆ ಮಾಡಿದನು.

"ಭೋಃ ! ಈ ಪೊದೆಯಲ್ಲಿ ತಲೆಕೆಳಗಾಗಿ ಜೋತಾಡುತ್ತಿರುವ ನೀವು ಯಾರು ? ನಿಮ್ಮ ಸ್ಥಿತಿಯನ್ನು ನೋಡಿ ನನಗೆ ಕನಿಕರ ಉಂಟಾಗಿದೆ. ನಿಮಗೆ ಉಪಕಾರ ಮಾಡಬೇಕೆಂಬ ಆಶಯದಿಂದ ಕೇಳುತ್ತಿದ್ದೇನೆ. ನಾನು ಬಹಳ ತಪಶ್ಚರಣೆ ಮಾಡಿರುವೆ. ನನ್ನ ತಪಸ್ಸಿನ ಫಲವೂ ಅಪಾರವಾಗಿದೆ. ನನ್ನ ತಪಃ ಪ್ರಭಾವದಿಂದ ನಿಮ್ಮ ದುಃಖ ನಿವಾರಣೆಯಾಗುವುದೇ ? ನೀವು ಈ ದುಃಸ್ಥಿತಿಯಿಂದ ಪಾರಾಗುವುದನ್ನು ಮಾತ್ರವೇ ನಾನು ಅಪೇಕ್ಷಿಸುತ್ತೇನೆ, ಬೇಗ ಹೇಳಿರಿ".

ಆ ಪಿತೃಗಳು ಜರತ್ಕಾರುವನ್ನು ಉದ್ದೇಶಿಸಿ ಹೇಳತೊಡಗಿದರು- ವಿಪ್ರಶ್ರೇಷ್ಠನೇ ! ನೀನು ಈಗಾಗಲೇ ವೃದ್ಧನಾಗಿರುವಿ, ಬ್ರಹ್ಮಚಾರಿಯಾಗಿರುವಿ. ಇಂತಹ ನೀನು ನಮ್ಮನ್ನು ರಕ್ಷಿಸಲು ಮುಂದೆ ಬಂದಿರುವಿ. ನಿನ್ನ ತಪಸ್ಸಿನ ಫಲವು ನಮ್ಮನ್ನು ಈ ಸ್ಥಿತಿಯಿಂದ ಪಾರುಮಾಡಲು ಸಮರ್ಥವಾಗಿಲ್ಲ. ಎಷ್ಟೇ ತಪಸ್ಸಿನ ಫಲವು ನಿನ್ನಲ್ಲಿ ಇದ್ದರೂ ನಮ್ಮ ಸಂತಾನ (ವಂಶ)ವು ಕ್ಷಯಿಸಿ ಹೋಗುತ್ತಿರುವ ಕಾರಣದಿಂದಾಗಿ ನಾವಿಂದು ಅಪವಿತ್ರವಾದ ನರಕದಲ್ಲಿ ಬೀಳುತ್ತಿದ್ದೇವೆ. ಶ್ರೇಷ್ಠ ಸಂತಾನವನ್ನು ಪಡೆಯುವದು ಪರಮಧರ್ಮವೆಂದು ಪಿತಾಮಹನು ಹೇಳಿದ್ದಾನೆ. ನೀನು ಯಾರು ಎಂಬುದು ನಮಗೆ ತಿಳಿದಿಲ್ಲ. ಆದರೂ ನಮ್ಮನ್ನು ಬಹಳ ಕರುಣೆಯಿಂದ ವಿಚಾರಿಸುತ್ತಿರುವುದರಿಂದ ನಮ್ಮ ವೃತ್ತಾಂತವನ್ನು ನಿನಗೆ ಹೇಳುತ್ತೇವೆ ಕೇಳು-

"ನಿಷ್ಠುರವ್ರತರಾದ ಯಾಯಾವರರೆಂಬ ಹೆಸರಿನ ಋಷಿಗಳೇ ನಾವು. ನಮ್ಮ ತಪಸ್ಸಿನ ಫಲದಿಂದಾಗಿ ಇದುವರೆಗೆ ಪುಣ್ಯ ಲೋಕಗಳಲ್ಲಿ ಇದ್ದೆವು. ಆದರೆ ನಮ್ಮ ವಂಶವು ಕ್ಷಯಿಸಿ ಹೋಗುತ್ತಿರುವ ಕಾರಣದಿಂದಾಗಿ ಪುಣ್ಯಲೋಕಗಳಿಂದ ಚ್ಯುತರಾದೆವು. ಸಂತಾನವಿಲ್ಲದ ಕಾರಣದಿಂದ ನಮ್ಮ ತಪಸ್ಸಿನ ಫಲವು ನಷ್ಟವಾಗಿದೆ. ಈ ಭೂಮಿಯಲ್ಲಿ ನಮ್ಮ ವಂಶೀಯನೊಬ್ಬನಿದ್ದಾನೆ. ಆದರೆ ಅವನು ಇದ್ದೂ ಇಲ್ಲದಂತಾಗಿದೆ. ಅವನು ಈ ಪ್ರಪಂಚದಲ್ಲಿ ಜರತ್ಕಾರು ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದಾನೆ. ಅವನು ಮಹಾತಪಸ್ವಿ, ವ್ರತನಿಷ್ಠ, ಜಿತೇಂದ್ರಿಯ, ಆದರೆ ಅವನು ತಪೋಲೋಭಿ ಅವನಿಗೆ ಜೀವನದಲ್ಲಿ ಬೇರೇನೂ ಬೇಕಿಲ್ಲ. ಈ ಕಾರಣದಿಂದ ನಾವು ಇಂತಹ ಕಷ್ಟದಲ್ಲಿ ಮುಳುಗಿದ್ದೇವೆ. ಬ್ರಾಹ್ಮಣೋತ್ತಮ ! ಅನಾಥರಂತೆ ಈ ಹಳ್ಳದಲ್ಲಿ ಪರಿತಪಿಸುತ್ತಿರುವ ನಮ್ಮನ್ನು ಸನಾಥರನ್ನಾಗಿ ಮಾಡಲು ನೀನು ನಮಗೊಂದು ಉಪಕಾರ ಮಾಡು. ನಿನ್ನ ಯಾತ್ರೆಯ (ಸಂಚಾರ) ಸಮಯದಲ್ಲಿ ಆ ಜರತ್ಕಾರು ವೇನಾದರೂ ಸಿಕ್ಕರೆ ಈ ಮಾತುಗಳನ್ನು ಅವನಿಗೆ ತಲುಪಿಸು.

"ನಿನ್ನ ಪಿತೃಗಳು ಹಳ್ಳವೊಂದರಲ್ಲಿ ಅಧೋಮುಖರಾಗಿ, ದೀನರಾಗಿ ಜೋತು ಬಿದ್ದಿದ್ದಾರೆ. ಅವರ ದುರವಸ್ಥೆಯನ್ನು ತಪ್ಪಿಸಬೇಕಾದರೆ ನೀನು ಅವಶ್ಯವಾಗಿ ಕೂಡಲೇ ಮದುವೆಯಾಗಿ ಮಕ್ಕಳನ್ನು ಪಡೆದು ಅವರ ವಂಶಾಭಿವೃದ್ಧಿ ಮಾಡು, ಮುಂದುವರಿದು ನಮ್ಮ ಹಿತಚಿಂತಕನಾಗಿ ನಮ್ಮನ್ನು ವಿಚಾರಿಸುತ್ತಿರುವ ನೀನು ಯಾರೆಂದು ತಿಳಿಸು" ಎಂಬುದಾಗಿ ಕೇಳಿಕೊಂಡರು.

ಪಿತೃಗಳ ಮಾತನ್ನು ಕೇಳಿ ಬಹಳ ದುಃಖದಿಂದ ಗದ್ಗದ ಧ್ವನಿಯಿಂದ ಅವನು ಪಿತೃಗಳನ್ನು ಕುರಿತು ಹೇಳಿದನು.

"ನೀವೇ ನನ್ನ ಪಿತೃಗಳು. ನಿಮಗೆ ಪ್ರಿಯವಾಗುವ ಯಾವ ಕಾರ್ಯವನ್ನಾದರೂ ಹೇಳಿರಿ ಮಾಡಲು ಸಿದ್ಧನಾಗಿದ್ದೇನೆ. ಪಾಪಭೂಯಿಷ್ಠನಾದ, ನಿಮ್ಮ ಮಗನಾದ ಆ ಜರತ್ಕಾರುವೇ ನಾನಾಗಿದ್ದೇನೆ. ನಿಮ್ಮ ವಿಷಯದಲ್ಲಿ ದುಷ್ಕಾರ್ಯವನ್ನೆಸಗಿದ ದುರಾತ್ಮನಾದ ನನಗೆ ಯಾವ ಶಿಕ್ಷೆಯನ್ನಾದರೂ ಕೊಡಿರಿ. ಸ್ವೀಕರಿಸಲು ಸಿದ್ಧನಾಗಿದ್ದೇನೆ" ಎಂದಾಗ ಪಿತೃಗಳು ಹೇಳಿದರು. ಮಗು ! ಕೇವಲ ಅದೃಷ್ಟವಶದಿಂದ ನೀನು ನಮ್ಮ ದುಃಸ್ಥಿತಿಯನ್ನು ಕಾಣಲು ಆಗಮಿಸಿರುವಿ. ನೀನು ಇದುವರೆಗೆ ಏಕೆ ಪತ್ನೀವಂತನಾಗಿಲ್ಲ ?

ಜರತ್ಕಾರು ಹೇಳತೊಡಗಿದ, ಪಿತೃಗಳೇ "ನನಗೆ ಮದುವೆಯಾಗುವ ಇಚ್ಛೆಯೇ ಉಂಟಾಗಿಲ್ಲ. ಅಂತ್ಯಕಾಲದ ವರೆಗೆ ಹೀಗೆಯೇ ಊರ್ಧ್ವರೇತಸ್ಕನಾಗಿದ್ದು ಸ್ವರ್ಗಕ್ಕೆ ಹೋಗುವ ವಿಚಾರ ಮಾಡಿದ್ದೆ. ಆದರೆ ನೀವು ಇಲ್ಲಿ ಜೋತುಬಿದ್ದಿರುವುದನ್ನು ನೋಡಿದ ನಂತರ ನನ್ನ ಅಚಲವಾದ ನಿರ್ಧಾರವನ್ನು ಬದಲಾಯಿಸಿದ್ದೇನೆ. ನಿಮಗೆ ಪ್ರಿಯವನ್ನುಂಟುಮಾಡಲು ನಾನು ಮದುವೆಯಾಗುತ್ತೇನೆ. ನನ್ನ ಕೆಲವು ಕರಾರುಗಳಿವೆ. (೧) ನನ್ನನ್ನು ಮದುವೆಯಾಗುವ ಕನ್ಯೆ ನನ್ನ ಹೆಸರಿನವಳೇ ಆಗಿರಬೇಕು. (೨) ನನಗೆ ಕನ್ಯೆಯನ್ನು ಭಿಕ್ಷಾರೂಪವಾಗಿ ಕೊಡಬೇಕು. (೩) ನನಗವಳನ್ನು ಸಾಕುವ ಹವ್ಯಾಸವಿಲ್ಲ.

ಈ ನಿಯಮಗಳಿಗೆ ಒಪ್ಪಿಕೊಳ್ಳುವ ಕನ್ಯೆಯು ಸಿಕ್ಕಿದರೆ ಮದುವೆಯಾಗಿ, ಅದರಿಂದ ಸಂತಾನವು ಹುಟ್ಟಿ ನಿಮ್ಮ ಉದ್ಧಾರವಾಗುವುದಾದರೆ ಆಗಲಿ, ನನ್ನ ಪಿತೃಗಳು ಅಕ್ಷಯವಾದ ಬ್ರಹ್ಮಲೋಕವನ್ನು ಪಡೆಯಲಿ'' ಎಂದನು.

ಹೀಗೆ ಹೇಳಿ ತನ್ನ ಸಂಚಾರವನ್ನು ಮುಂದುವರಿಸಿ ಅರಣ್ಯದಲ್ಲಿ ಕನ್ಯಾಭಿಕ್ಷೆಯನ್ನು ಬೇಡಿ ಮದುವೆ ಮಾಡಿಕೊಂಡು ಸಂತಾನವನ್ನು ಪಡೆದು ಆ ಪಿತೃಗಳ ಉದ್ಧಾರಮಾಡಿದನು.

ಈ ಶ್ರೀಮನ್ ಮಹಾಭಾರತದ ಆಖ್ಯಾನದಿಂದ ''ಪ್ರತಿಯೊಬ್ಬ ಬ್ರಾಹ್ಮಣನು ಪಿತೃಗಳ ಉದ್ಧಾರವನ್ನು ಅಪೇಕ್ಷಿಸುವುದಾದರೆ ವಿವಾಹ ಸಂಸ್ಕಾರವನ್ನು ಹೊಂದಿ ಸತ್ಸಂತಾನವನ್ನು ಪಡೆಯಬೇಕು'' ಎಂಬುದು ತಿಳಿದುಬರುತ್ತದೆ.

– ⊙ –

# ಸ್ತ್ರೀಗೆ ವಿವಾಹ ಅವಶ್ಯವೇ ? ಒಂದು ಉಪಾಖ್ಯಾನ

ಪುರುಷರಿಗೆ ಚೌಲ, ಉಪನಯನ, ವಿವಾಹ ಮುಂತಾದ ಸಂಸ್ಕಾರಗಳು ವಿಹಿತವಾಗಿರುವಂತೆ, ಸ್ತ್ರೀಗೆ ವಿವಾಹ ಸಂಸ್ಕಾರವು ಅವಶ್ಯವಾಗಿದೆ. "ಸ್ತ್ರೀಣಾಂ ಪ್ರದಾನಕರ್ಮೈವ ಯಥೋಪನಯನಂ ತಥಾ" ಎಂಬ ಶ್ರೀಮದ್ ಬ್ರಹ್ಮಸೂತ್ರ ಭಾಷ್ಯದ (೧-೩-೩೬) ಉಕ್ತಿಯಂತೆ ಸ್ತ್ರೀಯರಿಗೆ ವಿವಾಹ ಸಂಸ್ಕಾರವೇ (ಕನ್ಯಾಪ್ರದಾನ ಸಂಸ್ಕಾರವೇ) ವಿಹಿತ ಸಂಸ್ಕಾರವೆಂದು ತಿಳಿಯಬೇಕು.

ಸ್ತ್ರೀಗೆ ಪ್ರತ್ಯೇಕ ಯಜ್ಞಾದಿಗಳಾಗಲೀ, ವ್ರತಾದಿಗಳಾಗಲಿ ಇಲ್ಲವೇ ಇಲ್ಲ. ಅವಳು ವಿವಾಹ ಸಂಸ್ಕಾರವನ್ನು ಹೊಂದಿ ಪತಿಯ ಶುಶ್ರೂಷೆಯನ್ನು ಮಾಡುವ ಮಾತ್ರದಿಂದ ಸ್ವರ್ಗಾದಿ ಉತ್ತಮಲೋಕಗಳನ್ನು ಪಡೆಯುತ್ತಾಳೆ. ಅಲ್ಲಿ ಪೂಜಿಸಲ್ಪಡುತ್ತಾಳೆ.[೧]

ಸ್ತ್ರೀಯಾದವಳು ತನ್ನ ರಕ್ಷಣೆಗಾಗಿ ವಿವಾಹ ಸಂಸ್ಕಾರವನ್ನು ಹೊಂದುವದು ಅವಶ್ಯವಾಗಿದೆ. ಬಾಲ್ಯದಲ್ಲಿ ಅವಳನ್ನು ತಂದೆಯು ರಕ್ಷಿಸುತ್ತಾನೆ. ಯೌವನದಲ್ಲಿ ಪತಿಯು ರಕ್ಷಿಸುತ್ತಾನೆ. ವೃದ್ಧಾಪ್ಯದಲ್ಲಿ ಮಕ್ಕಳು ರಕ್ಷಿಸುತ್ತಾರೆ. ಹೀಗಾಗಿ ಸ್ತ್ರೀಯು ತನ್ನ ರಕ್ಷಣೆಯ ವಿಷಯದಲ್ಲಿ ಸ್ವಾತಂತ್ರ್ಯ ವಹಿಸುವದು ಅವಶ್ಯವಿಲ್ಲ.[೨]

ಸ್ತ್ರೀಯಾದವಳಿಗೆ ಪತಿಯು ಭೂಷಣವಸ್ತುಗಳಲ್ಲಿ ಅತಿಭೂಷಣನೆನಿಸಿದ್ದಾನೆ.[೩]

---

೧) ನಾಸ್ತಿ ಸ್ತ್ರೀಣಾಂ ಪೃಥಗ್ಯಜ್ಞೋ
ನ ವ್ರತಂ ನಾಪ್ಯುಪೋಷಣಮ್ ।
ಪತಿಂ ಶುಶ್ರೂಷತೆ ಯೇನ
ತೇನ ಸ್ವರ್ಗೇ ಮಹೀಯತೇ ॥ ಮನುಸ್ಮೃತಿ (೫-೧೫೫)

೨) ಪಿತಾ ರಕ್ಷತಿ ಕೌಮಾರೇ
ಭರ್ತಾ ರಕ್ಷತಿ ಯೌವನೇ ।
ರಕ್ಷಂತಿ ಸ್ಥವಿರೇ ಪುತ್ರಾ
ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ ॥ ಮನುಸ್ಮೃತಿ (೯-೩)

೩) ಭರ್ತಾನಾಮ ಪರಂ ನಾರ್ಯಾ ಭೂಷಣಾದಪಿ ಭೂಷಣಮ್ ॥
(ವಾಲ್ಮೀಕಿ ರಾಮಾಯಣ)

ಸ್ತ್ರೀಗೆ ವೈವಾಹಿಕ ವಿಧಿಯೇ ವೈದಿಕ ಸಂಸ್ಕಾರವೆಂದು ಪರಿಗಣಿಸಲ್ಪಟ್ಟಿದೆಯೆಂದು ಮನುಸ್ಮೃತಿಕಾರರು ತಿಳಿಸಿದ್ದಾರೆ.[೪]

ಸಂಸ್ಕಾರ ರಹಿತಳಾದ ಸ್ತ್ರೀಗೆ ಉತ್ತಮ ಪುಣ್ಯಲೋಕಗಳೂ ದೊರೆಯುವದಿಲ್ಲ.[೫] ಆದ್ದರಿಂದ ಸ್ತ್ರೀಗೆ ವಿಹಿತಸಂಸ್ಕಾರವೆನಿಸಿದ ವಿವಾಹವು ಅತ್ಯವಶ್ಯವಾಗಿದೆಯೆಂದು ತಿಳಿಯಬೇಕು.

ಸ್ತ್ರೀಗೆ ವಿವಾಹವು ಅವಶ್ಯವೆಂಬುದನ್ನು ತಿಳಿಸಲು ಶ್ರೀಮನ್ ಮಹಾಭಾರತದಲ್ಲಿ ಉಪಾಖ್ಯಾನವೊಂದನ್ನು ನಿರೂಪಿಸಿದ್ದಾರೆ.

ಹಿಂದೆ ಮಹಾವೀರ್ಯನಾದ, ಮಹಾಯಶೋವಂತನಾದ ಕುಣಿಗರ್ಗ ಎಂಬ ಹೆಸರಿನ ಋಷಿಯಿದ್ದನು. ತಪಸ್ವಿಗಳಲ್ಲಿ ಶ್ರೇಷ್ಠನಾಗಿದ್ದ ಆ ಮಹರ್ಷಿಯು ಬಹಳ ತಪಸ್ಸು ಮಾಡಿ ಸುಂದರಳಾದ ಮಗಳನ್ನು ಮನಃ ಸಂಕಲ್ಪದಿಂದಲೇ ಸೃಷ್ಟಿಸಿ ಅವಳನ್ನು ನೋಡಿ ಪರಮ ಸಂತುಷ್ಟನಾದನು. ಕೆಲವು ಕಾಲದ ತರುವಾಯ ತನ್ನ ಶರೀರವನ್ನು ತ್ಯಜಿಸಿ ಸ್ವರ್ಗಕ್ಕೆ ಹೊರಟುಹೋದನು.

ನಂತರ ಆ ಸುಂದರಳಾದ ನಿಷ್ಕಳಂಕಳಾದ ಆ ಋಷಿಕನ್ಯೆಯು ಒಂದು ಆಶ್ರಮವನ್ನು ಮಾಡಿಕೊಂಡು ಉಗ್ರತಪಸ್ಸು ಮಾಡುತ್ತ ಪಿತೃಗಳನ್ನು ದೇವತೆಗಳನ್ನು ತೃಪ್ತಿಗೊಳಿಸುತ್ತಿದ್ದಳು. ಹೀಗೆ ತಪಸ್ಸು ಮಾಡುತ್ತ ಅನೇಕ ವರ್ಷಗಳು ಉರುಳಿದವು. ಅವಳ ತಂದೆಯಾದ ಕುಣಿಗರ್ಗ ಋಷಿಯು ಅವಳನ್ನು ಯೋಗ್ಯ ವರನಿಗೆ ಕೊಟ್ಟು ವಿವಾಹ ಮಾಡಬೇಕೆಂದು ಪ್ರಯತ್ನಿಸಿದ್ದನು. ಆದರೆ ಅನಿಂದಿತೆಯಾದ ಆ ಕನ್ಯೆಯು ಸಮ್ಮತಿಸಿರಲಿಲ್ಲ. ತನಗೆ ಅನುರೂಪನಾದ ವರನು ಸಿಕ್ಕಲಿಲ್ಲವೆಂಬ ಭಾವನೆಯೇ ಅವಳ ಅಸಮ್ಮತಿಗೆ ಕಾರಣವಾಗಿತ್ತು. ಅವಳು ತನ್ನ ತಪಸ್ಸನ್ನು ಮುಂದುವರಿಸುತ್ತ ಹಾಗೆಯೇ ಕಾಲಕಳೆಯುತ್ತಿದ್ದಳು. ಇದರಿಂದ ತಾನು ಕೃತಾರ್ಥಳಾದೆನೆಂದು ಭಾವಿಸಿದ್ದರೂ ಸತತವಾದ ತಪಸ್ಸಿನಿಂದ ಅವಳು ಬಹಳವಾಗಿ ಬಳಲಿ ಬೆಂಡಾಗಿ ವೃದ್ಧಾಪ್ಯದಿಂದ ದಿನಗಳೆದಂತೆ ಕೃಶವಾಗಿ ಹೋದಳು. ಈ ಹೊತ್ತಿಗೆ ಇತರರ ಸಹಾಯವಿಲ್ಲದೇ ಒಂದು ಹೆಜ್ಜೆಯಿಡಲೂ ಸಾಧ್ಯವಾಗದಂತಾಯಿತು. ಕಾರಣ ತನ್ನ ಶರೀರವನ್ನು ಬಿಟ್ಟು ಪರಲೋಕಕ್ಕೆ ಹೊರಟು ಹೋಗಬೇಕೆಂದು ನಿಶ್ಚಯಿಸಿದಳು. ಈ ಸಮಯಕ್ಕೆ ಆ ಸ್ಥಳಕ್ಕೆ ಬಂದ ನಾರದರು ಅವಳನ್ನು ಕುರಿತು ಹೇಳಿದರು.

ಅಸಂಸ್ಕೃತಾಯಾಃ ಕನ್ಯಾಯಾಃ ಕುತೋ ಲೋಕಾಸ್ತವಾನಘೇ ॥

---

೪) ವೈವಾಹಿಕೋ ವಿಧಿಃ ಸ್ತ್ರೀಣಾಂ ಸಂಸ್ಕಾರೋ ವೈದಿಕಃ ಸ್ಮೃತಃ ॥ (೨-೬೭)

೫) ಅಸಂಸ್ಕೃತಾಯಾಃ ಕನ್ಯಾಯಾಃ ಕುತೋ ಲೋಕಾಸ್ತವಾನಘೇ ॥

(ಶ್ರೀಮನ್ ಮಹಾಭಾರತ)

ಅಸಂಸ್ಕೃತಳಾದ (ಸಂಸ್ಕಾರ ರಹಿತಳಾದ) ನಿನಗೆ ಉತ್ತಮವಾದ ಪುಣ್ಯಲೋಕಗಳು ಹೇಗೆ ತಾನೇ ಲಭಿಸುತ್ತವೆ ? ನೀನು ಸುದುಷ್ಕರವಾದ ತಪಸ್ಸನ್ನು ಆಚರಿಸಿದ್ದರೂ ಕೂಡ ವಿವಾಹ ಸಂಸ್ಕಾರವಾಗದಿರುವುದರಿಂದ ನಿನಗೆ ಉತ್ತಮಗತಿ ಲಭಿಸುವದಿಲ್ಲ.

ನಾರದರ ಈ ಮಾತನ್ನು ಕೇಳಿ ಋಷಿಕನ್ಯೆಯು ವಿವಾಹ ಸಂಸ್ಕಾರವನ್ನು ಹೊಂದಲು ನಿಶ್ಚಯ ಮಾಡಿ ಋಷಿಗಳ ಸಮೂಹದಲ್ಲಿ ಹೀಗೆ ಘೋಷಿಸಿದಳು.

"ತಪಸೋಽರ್ಧಂ ಪ್ರಯಚ್ಛಾಮಿ ಪಾಣಿಗ್ರಾಹಸ್ಯ ಸತ್ತಮಾಃ" ।

ಸಾಧುಗಳೇ ! ನಿಮ್ಮಲ್ಲಿ ಯಾರು ನನ್ನ ಪಾಣಿಗ್ರಹಣವನ್ನು ಮಾಡುವಿರೋ ಅವರಿಗೆ ನಾನು ಇದು ವರೆಗೆ ಮಾಡಿದ ತಪಸ್ಸಿನ ಅರ್ಧಭಾಗವನ್ನು ಅರ್ಪಿಸುತ್ತೇನೆ.

ಋಷಿಕನ್ಯೆಯ ಮಾತನ್ನು ಕೇಳಿ ಗಾಲವರ ಮಗನಾದ ಶೃಂಗವಂತನೆಂಬ ಋಷಿಯು ಅವಳ ಪಾಣಿಗ್ರಹಣವನ್ನು ಮಾಡಿದನು. ಯಥಾವಿಧಿಯಾಗಿ ವಿವಾಹ ಸಂಸ್ಕಾರವು ನೆರವೇರಿತು. ನಂತರ ಆ ಸಾಧ್ವಿಯು ತನ್ನದೇಹತ್ಯಾಗ ಮಾಡಿ ಉತ್ತಮ ಲೋಕಗಳಿಗೆ ಹೊರಟು ಹೋದಳು.

ಇದರಿಂದ ಕನ್ಯೆಯಾದವಳಿಗೆ ವಿವಾಹ ಸಂಸ್ಕಾರವು ಅವಶ್ಯವೆಂದು ಸಿದ್ಧವಾಗುತ್ತದೆ.

– ⊙ –

# ಪುರುಷನ ವಿವಾಹಯೋಗ್ಯ ವಯಸ್ಸು, ಲಕ್ಷಣಗಳು

ಮೂವತ್ತು ವರ್ಷದ ಯುವಕನು (ಪುರುಷನು) ಹತ್ತುವರ್ಷದ ಋತುಮತಿಯಾಗದಿರುವ ಕನ್ಯೆಯನ್ನು ಮದುವೆ ಮಾಡಿಕೊಳ್ಳಬೇಕು. ಇಪ್ಪತ್ತೊಂದು ವರ್ಷದ ಪುರುಷನು ಏಳುವರ್ಷದ ಕನ್ಯೆಯನ್ನು ಮದುವೆಯಾಗಬೇಕು.[೧]

ಸತ್ಪುರುಷರಾದವರು ವರನ ಶೀಲ, ಸ್ವಭಾವ, ವಿದ್ಯಾಭ್ಯಾಸ, ಕುಲ, ಸದಾಚಾರ ಮತ್ತು ಅವನು ಮಾಡುತ್ತಿರುವ ಕಾರ್ಯ ಇವುಗಳನ್ನು ಚೆನ್ನಾಗಿ ಪರಿಶೀಲಿಸಿ ವರನಲ್ಲಿ ಈ ಗುಣಲಕ್ಷಣಗಳು ಇರುತ್ತವೆಂದು ಕಂಡುಬಂದರೆ ಅಂತಹ ಗುಣಯುಕ್ತನಾದ ವರನಿಗೆ ಕನ್ಯೆಯನ್ನು ಕೊಡಬೇಕು ಎಂಬುದಾಗಿ ಶ್ರೀಮನ್ ಮಹಾಭಾರತದಲ್ಲಿ ತಿಳಿಸಿದ್ದಾರೆ.[೨]

ವಿವಾಹಯೋಗ್ಯ ಪುರುಷನು ಕಣ್ಣಿದ್ದು ಕುರುಡನಾಗಿರಬೇಕು. ಅದು ಹೇಗೆ ? ಇದನ್ನು ತಿಳಿಸಲು ಶ್ರೀಮನ್ ಮಹಾಭಾರತದಲ್ಲಿ ಒಂದು ಆಖ್ಯಾನವನ್ನು ನಿರೂಪಿಸಿದ್ದಾರೆ. ಅದು ಹೀಗಿದೆ-

ದೇವಲ ಬ್ರಾಹ್ಮಣನಿಗೆ ಓರ್ವ ಸುಂದರಿಯಾದ, ವಿದ್ಯಾಸಂಪನ್ನೆಯಾದ ಸದ್ಗುಣಗಳ ಖಣಿಯಾದ ಸುವರ್ಚಲಾ ಎಂಬ ಹೆಸರಿನ ಕುಮಾರಿಯು ಇದ್ದಳು. ಆವಳಿಗೆ ವಿವಾಹ ಸಮಯವು ಪ್ರಾಪ್ತವಾದಾಗ ಅವಳನ್ನು ವರಿಸಲು ಅನೇಕ ವಿದ್ಯಾವಂತ ಪುರುಷರು ಬಂದರು. ಆಗ ಸುವರ್ಚಲೆಯು ತನ್ನ ತಂದೆಯನ್ನು ಕುರಿತು "ನನ್ನ ಪ್ರಶ್ನೆಗೆ ಸರಿಯಾದ ಉತ್ತರ ಕೊಡುವ ಪುರುಷನನ್ನು ನಾನು ವರಿಸುವೆನು" ಎಂದು ತಿಳಿಸಿದಾಗ ಅದಕ್ಕೆ ತಂದೆ ಸಮ್ಮತಿಸಿದರು.

ವಿವಾಹ ಮಾಡಿಕೊಳ್ಳಬೇಕೆಂದು ಇಚ್ಛಿಸಿ ವರಗಳು ಬಂದಾಗ ಅವರನ್ನು ಕುರಿತು "ಕಣ್ಣಿದ್ದು ಕುರುಡನಾಗಿದ್ದರೆ ಅಂಥವರನ್ನು ಮಾತ್ರ ವರಿಸುವೆನೆಂದು" ಹೇಳುತ್ತಿದ್ದಳು.

---

೧) ತ್ರಿಂಶದ್ವರ್ಷೋ ದಶವರ್ಷಾಂ ಭಾರ್ಯಾಂ ವಿಂದೇತ ನಗ್ನಿಕಾಮ್ ।
ಏಕವಿಂಶತಿವರ್ಷೋ ವಾ ಸಪ್ತವರ್ಷಾಮವಾಪ್ನುಯಾತ್ ॥ ಅನುಶಾಸನಪರ್ವ
(ನಗ್ನಿಕಾ - ಏಕವಸ್ತ್ರಧಾರಿಣೀ)
**ಈಗಿನ ವಿವಾಹ ಕಾನೂನಿನ ಪ್ರಕಾರ ಪುರುಷನ ವಯಸ್ಸು ಕನಿಷ್ಠ ೨೧ ಮತ್ತು ಸ್ತ್ರೀಯ ವಯಸ್ಸು ಕನಿಷ್ಠ ೧೮ ಇರಬೇಕು.**

೨) ಶೀಲವೃತ್ತೇ ಸಮಾಜ್ಞಾಯ ವಿದ್ಯಾಂ ಯೋನಿಂ ಚ ಕರ್ಮಚ ।
ಸದ್ಭಿರೇವಂ ಪ್ರದಾತವ್ಯಾ ಕನ್ಯಾಗುಣಯುತೇ ವರೇ ॥ ಅನುಶಾಸನಪರ್ವ

ಅವಳ ಪ್ರಶ್ನೆಗೆ ಉತ್ತರ ಹೇಳಲು ತಿಳಿಯದೇ ಅನೇಕ ಪುರುಷರು ಮರಳಿ ಹೋಗುತ್ತಿದ್ದರು. ಇದನ್ನು ನೋಡಿ ದೇವಲರಿಗೂ ಸ್ವಲ್ಪ ಚಿಂತೆ ಆಯಿತು.

ಒಂದು ದಿನ ನಚಿಕೇತ ಎಂಬ ವಿದ್ಯಾವಂತ ತರುಣನು ದೇವಲರ ಬಳಿ ಕನ್ಯಾರ್ಥಿಯಾಗಿ ಬಂದಾಗ ಸುವರ್ಚಲೆಯು ಎಲ್ಲರಿಗೂ ಕೇಳಿದಂತೆ "ನೀವು ಕಣ್ಣಿದ್ದು ಕುರುಡರೋ ?" ಎಂಬ ಪ್ರಶ್ನೆ ಕೇಳಿದಳು. ಆಗ ನಚಿಕೇತ ಬ್ರಾಹ್ಮಣನು ಹೌದು ಎಂದು ಉತ್ತರಿಸಿದನು. ಅದು ಹೇಗೆ ? ಎಂದಾಗ ನಚಿಕೇತನು "ನಾನು ಜಪ ತಪ ಶಾಸ್ತ್ರಾಧ್ಯಯನ ಮಾಡಿ ದೇವರನ್ನು ಕಂಡಿದ್ದರಿಂದ ಕಣ್ಣಿದ್ದವನು, ದೇವರ ರೂಪವನ್ನು ಬಿಟ್ಟು ಉಳಿದ ಜಗತ್ತನ್ನು ನಾನು ನೋಡುವದಿಲ್ಲ. ಉದಾಸೀನನಾಗಿ ಇರುತ್ತೇನೆ, ಕಾರಣ ನಾನು ಕುರುಡನೂ ಹೌದು" ಎಂದು ಉತ್ತರಿಸಿದನು. ಈ ಉತ್ತರದಿಂದ ಸಮಾಧಾನಗೊಂಡ ಆ ಸುವರ್ಚಲೆಯು ನಚಿಕೇತನನ್ನು ವಿವಾಹ ಮಾಡಿಕೊಂಡು ದೀರ್ಘಕಾಲ ಸಂಸಾರ ನೌಕೆಯನ್ನು ಏರಿ ಚೆನ್ನಾಗಿ ಬಾಳಿ ಕೊನೆಗೆ ಮೋಕ್ಷವನ್ನು ಹೊಂದಿ ಶಾಶ್ವತ ಸುಖ ಭಾಗಿಯಾದಳು.

ಇದರಿಂದ ವಿವಾಹಯೋಗ್ಯ ಪುರುಷನಲ್ಲಿ ಯಾವ ಮುಖ್ಯ ಲಕ್ಷಣಗಳು ಇರಬೇಕೆಂಬುದು ಸ್ಪಷ್ಟವಾಗುತ್ತದೆ.

– ⊙ –

# ವಿವಾಹಯೋಗ್ಯ ಸ್ತ್ರೀ (ಕನ್ಯಾ) ಲಕ್ಷಣಗಳು

ಕನ್ಯೆಯು ಸತ್ಕುಲ ಪ್ರಸೂತಳಾಗಿರಬೇಕು. ಅವಳಿಗೆ ತಂದೆ, ತಾಯಿ, ಅಣ್ಣ, ತಮ್ಮ ಮತ್ತು ಬಂಧು ಬಾಂಧವರಿರಬೇಕು. ಅವಳ ವಂಶವು ಧನ ಧಾನ್ಯ ಕೀರ್ತಿಗಳಿಂದ ತುಂಬಿರಬೇಕು. ಅವಳ ಕುಲವು ಈ ಕೆಳಗಿನ ಹತ್ತು ದೋಷಗಳಿಂದ ಮುಕ್ತವಾಗಿರಬೇಕು.[೧]

೧) ಜಾತಕರ್ಮ ಮುಂತಾದ ಸಂಸ್ಕಾರಗಳು ಮತ್ತು ನಿತ್ಯ ಕರ್ಮಗಳು ಸಹ ನಡೆಯದಿರುವ ಸಂಸ್ಕಾರಹೀನತೆ.

೨) ಗಂಡು ಸಂತಾನವೇ ಇರದಿರುವುದು (ಅಂದರೆ ಕೇವಲ ಹೆಣ್ಣು ಸಂತಾನ ವಿರುವುದು).

೩) ಸಾಂಗ ವೇದಾಧ್ಯಯನ ನಡೆಯದಿರುವುದು.

೪) ಶರೀರದ ತುಂಬ ಬಹಳ ರೋಮಗಳಿರುವುದು.

೫) ಮೂಲವ್ಯಾಧಿ ರೋಗವುಳ್ಳವರು.

೬) ಕ್ಷಯರೋಗವಿರುವುದು.

೭) ಜಠರಾಗ್ನಿ ಸರಿಯಾಗಿ ಕೆಲಸ ಮಾಡದಿರುವುದು.

೮) ಮೂರ್ಛೆ ರೋಗವಿರುವುದು.

೯) ತೊನ್ನು ರೋಗವಿರುವುದು.

೧೦) ಕುಷ್ಠ ರೋಗವಿರುವುದು.

ಈ ಮೇಲಿನ ದೋಷಗಳಿರುವ ಕುಲವು ಆಕಳು, ಧನ, ಧಾನ್ಯಗಳಿಂದ ಸಮೃದ್ಧವಾಗಿದ್ದರೂ ಆ ಕುಲದ ಕನ್ಯೆಯನ್ನು ಸ್ವೀಕರಿಸಬಾರದು. ಹಾಗೂ ಸಗೋತ್ರದ ಕನ್ಯೆಯನ್ನು ಕೂಡ ಸ್ವೀಕರಿಸಕೂಡದು.

---

೧) ಮಹಾಂತ್ಯಪಿ ಸಮೃದ್ಧಾನಿ ಗೋಜಾವಿ ಧನಧಾನ್ಯತಃ ।
ಸ್ತ್ರೀ ಸಂಬಂಧೇ ದಶೈತಾನಿ ಕುಲಾನಿ ಪರಿವರ್ಜಯೇತ್ ॥
ಹೀನಕ್ರಿಯಂ ನಿಷ್ಪುರುಷಂ ನಿಶ್ಛಂದೋ ರೋಮ ಶಾರ್ಶಸಮ್ ।
ಕ್ಷಯ್ಯಾಮಯಾವ್ಯಪಸ್ಮಾರಿ ಶ್ವಿತ್ರಿ ಕುಷ್ಠಿ ಕುಲಾನಿ ಚ ॥ (೩-೬,೭) ಮನುಸ್ಮೃತಿ

ಕನ್ಯೆಯು ಶುಭಲಕ್ಷಣಗಳಿಂದ ಕೂಡಿರಬೇಕು. ಅಂದರೆ ವೈಧವ್ಯ, ಬಂಜೆತನ, ಮುಂತಾದವುಗಳನ್ನು ಸೂಚಿಸುವ ಲಕ್ಷಣಗಳಿಂದ ಕೂಡಿರಬಾರದು. (ಈ ಲಕ್ಷಣವನ್ನು ಸಾಮುದ್ರಿಕ ಹಾಗೂ ಜ್ಯೋತಿಷ್ಕರ ಸಹಾಯದಿಂದ ತಿಳಿಯಬಹುದು) ಕನ್ಯೆಯ ಅಂಗಾಂಗಗಳು ಊನವಾಗಿರಬಾರದು. ಅವಳ ಹೆಸರು ಮಧುರವಾಗಿರಬೇಕು. ಅವಳ ನಡಿಗೆಯು ಹಂಸದಂತೆ ಅಥವಾ ಗಜದಂತೆ ಇರಬೇಕು. ಅವಳ ರೋಮ, ಕೇಶ ಮತ್ತು ಹಲ್ಲುಗಳು ಮೃದುವಾಗಿರಬೇಕು.[೨]

ಅಯೋಗ್ಯ ಕನ್ಯೆಯ ಲಕ್ಷಣಗಳು ಹೀಗಿವೆ.[೩]

೧) ಅತಿ ಕಪ್ಪಾದವಳು, ೨) ಅಧಿಕ ಅಂಗವುಳ್ಳವಳು, ೩) ಸದಾರೋಗಿಯು, ೪) ರೋಮರಹಿತಳು, ೫) ಅತಿಯಾದ ರೋಮವುಳ್ಳವಳು, ೬) ವಾಚಾಳಿಯು, ೭) ಬೆಕ್ಕಿನ ಕಣ್ಣುಳ್ಳವಳು, ೮) ನಕ್ಷತ್ರ, ಮರ, ನದಿ, ಅಂತ್ಯಜ, ಪರ್ವತ, ಪಕ್ಷಿ, ನಾಗ, ದಾಸಿ, ಮುಂತಾದ ಹೆಸರುಳ್ಳವಳು, ೯) ಸಹೋದರರೇ ಇಲ್ಲದವಳು. ೧೦) ತಂದೆ ಯಾರೆಂದು ಗೊತ್ತಿಲ್ಲದವಳು.

– ⊙ –

---

೨) ಅವ್ಯಂಗಾಂಗೀ ಸೌಮ್ಯನಾಮ್ನೀ ಹಂಸವಾರಣಗಾಮಿನೀಮ್ ।
ತನು, ಲೋಮ, ಕೇಶ, ದಶನಾಂ ಮೃದ್ವಂಗೀಮುದ್ವಹೇತ್ ಸ್ತ್ರಿಯಮ್ ॥ (೩-೧೦)

೩) ನೋದ್ವಹೇತ್ ಕಪಿಲಾಂ ಕನ್ಯಾಂ ನಾಧಿಕಾಂಗೀಂ ನ ರೋಗಿಣೀಮ್ ।
ನಾಲೋಮಿಕಾಂ ನಾತಿಲೋಮಾಂ ನ ವಾಚಾಟಾಂ ನ ಪಿಂಗಲಾಮ್ ॥
ನರ್ಕ್ಷ ವೃಕ್ಷನದೀನಾಮ್ನೀಂ ನಾಂತ್ಯಪರ್ವತ ನಾಮಿಕಾಮ್ ।
ನ ಪಕ್ಷ್ಯಹಿ ಪ್ರೇಷ್ಯನಾಮ್ನೀಂ ನ ಚ ಭೀಷಣನಾಮಿಕಾಮ್ ॥
ಯಸ್ಯಾಸ್ತು ನ ಭವೇದ್ ಭ್ರಾತಾ ನ ವಿಜ್ಞಾಯೇತ ವಾ ಪಿತಾ ।
ನೋಪಯಚ್ಛೇತ ತಾಂ ಪ್ರಾಜ್ಞಃ ಪುತ್ರಿಕಾಧರ್ಮ ಶಂಕಯಾ ॥ (೩-೮, ೯, ೧೧)

# ಸ್ತ್ರೀ (ಕನ್ಯೆ)ಯಲ್ಲಿರಬೇಕಾದ ಶ್ರೇಷ್ಠ ಅಲಂಕಾರಗಳು

ಕನ್ಯೆಯ ತಂದೆಯಾದವನು ಸಾಲಂಕೃತ 'ಕನ್ಯಾದಾನ'ವನ್ನು ಮಾಡಿಕೊಡಬೇಕಾಗುತ್ತದೆ. ಕನ್ಯೆಯಲ್ಲಿ ಯಾವ ಯಾವ ಅಲಂಕಾರಗಳು ಇರಬೇಕು ? ಎಂಬುದನ್ನು ಶ್ರೀವೇದವ್ಯಾಸರು ಪದ್ಮಮಹಾಪುರಾಣದಲ್ಲಿ ತಿಳಿಸಿಕೊಟ್ಟಿದ್ದಾರೆ. ಅವು ಹೀಗಿವೆ-

ಕನ್ಯೆಯಲ್ಲಿ ಇರಬೇಕಾದ ಶ್ರೇಷ್ಠ ಅಲಂಕಾರಗಳೆಂದರೆ 'ಸದ್ಗುಣ'ಗಳೇ ಆಗಿವೆ- ಈ ಅಲಂಕಾರಗಳ ಸಂಖ್ಯೆ ಹನ್ನೆರಡು.[೧]

೧) ಮೊದಲನೆಯ ಆಭರಣ ಸಾತ್ವಿಕರೂಪ, ೨) ಎರಡನೆಯ ಆಭರಣ ಶೀಲ (ಶುದ್ಧ ಚಾರಿತ್ರ್ಯ), ೩) ಮೂರನೆಯ ಆಭರಣ ಸತ್ಯ, ೪) ನಾಲ್ಕನೆಯ ಆಭರಣ ಆರ್ಜವ (ಸರಳತನ), ೫) ಐದನೆಯ ಆಭರಣ ಧರ್ಮ, ೬) ಆರನೆಯ ಆಭರಣ ಮಧುರತೆ (ಮಾಧುರ್ಯ), ೭) ಏಳನೆಯ ಆಭರಣ ಅಂತರ್ಬಾಹ್ಯ ಶುದ್ಧತ್ವ, ೮) ಎಂಟನೆಯ ಆಭರಣ ಪಿತುರ್ಭಾವ, ೯) ಒಂಬತ್ತನೆಯ ಆಭರಣ ಶುಶ್ರೂಷಾ, ೧೦) ಹತ್ತನೆಯ ಆಭರಣ ಸಹನಶೀಲತೆ, ೧೧) ಹನ್ನೊಂದನೆಯ ಆಭರಣ ರತಿ, ೧೨) ಹನ್ನೆರಡನೆಯ ಆಭರಣ ಪಾತಿವ್ರತ್ಯ. ಈ ಆಭರಣಗಳ ಕುರಿತು ಸಂಕ್ಷಿಪ್ತವಾಗಿ ವಿವರಣೆಯನ್ನು ಇಲ್ಲಿ ಕೊಡಲಾಗಿದೆ-

೧) **ಸಾತ್ವಿಕರೂಪ :** ರೂಪವು ಸ್ತ್ರೀಯರ ಮುಖ್ಯ ಆಭರಣವಾಗಿದೆ. ಭಗವಂತನಲ್ಲಿ ವಿಶ್ವಾಸವಿಟ್ಟು ಶಾಸ್ತ್ರೋಕ್ತ ವ್ರತನಿಯಮಗಳನ್ನು ಆಚರಿಸಿದಲ್ಲಿ ತೇಜಃಪುಂಜವಾದ ಸಾತ್ವಿಕ ರೂಪವು ಪ್ರಾಪ್ತವಾಗುತ್ತದೆ. (ಇಲ್ಲಿ ಸೌಂದರ್ಯ

---

೧. ರೂಪಮೇವ ಗುಣಃ ಸ್ತ್ರೀಣಾಂ ಪ್ರಥಮಂ ಭೂಷಣಂ ಶುಭೇ ।
ಶೀಲಮೇವ ದ್ವಿತೀಯಂಚ ತೃತೀಯಂ ಸತ್ಯಮೇವ ಚ ॥
ಆರ್ಜವತ್ವಂ ಚತುರ್ಥಂ ಚ ಪಂಚಮಂ ಧರ್ಮಮೇವ ಹಿ ।
ಮಧುರತ್ವಂ ತತಃ ಪ್ರೋಕ್ತಂ ಷಷ್ಠಮೇವ ವರಾನನೇ ॥
ಶುದ್ಧತ್ವಂ ಸಪ್ತಮಂ ಬಾಲೇ ಅಂತರ್ಬಾಹ್ಯೇಷು ಯೋಷಿತಾಮ್ ।
ಅಷ್ಟಮಂತು ಪಿತುರ್ಭಾವಃ ಶುಶ್ರೂಷಾ ನವಮಂ ಕಿಲ ॥
ಸಹಿಷ್ಣುರ್ದಶಮಂ ಪ್ರೋಕ್ತಂ ರತಿಶ್ಚೈಕಾದಶಂ ತಥಾ ।
ಪಾತಿವ್ರತ್ಯಂ ತಥಾ ಪ್ರೋಕ್ತಂ ದ್ವಾದಶಂ ವರವರ್ಣಿನಿ ॥
(ಪದ್ಮಪುರಾಣ ಭೂಮಿಖಂಡ ಅ. ೩೪)

ಪ್ರಾಪ್ತಿಗಾಗಿ ಶ್ರೀ ಹರಿವಂಶ ಪುರಾಣದಲ್ಲಿ ತಿಳಿಸಿದ ವ್ರತಗಳನ್ನು ಅನುಷ್ಠಾನ ಮಾಡಬಹುದಾಗಿದೆ.)

೨) **ಶೀಲ ಅಥವಾ ಶುದ್ಧ ಚಾರಿತ್ರ್ಯ** : ಕುಟುಂಬದಲ್ಲಿ ಬಾಳುವ ಸ್ತ್ರೀಯು ಮರ್ಯಾದೆಯಿಂದ ವರ್ತಿಸಿ (ಹೆಣ್ಣುಮಕ್ಕಳಿಗೆ ಇರಬೇಕಾದ ನಾಚಿಕೆಯಿಂದ ವರ್ತಿಸಿ) ನಿಯಮಬದ್ಧವಾಗಿ ನಡೆದುಕೊಂಡು ತಮ್ಮ ಶೀಲವನ್ನು ಕಾಯ್ದುಕೊಳ್ಳಬೇಕು. ಕೌಟುಂಬಿಕ, ಸಾಮಾಜಿಕ ಗಾಂಭೀರ್ಯತೆಯು ಸ್ತ್ರೀಯರ ಶೀಲವನ್ನು ಅವಲಂಬಿಸಿದೆಯೆಂಬುದನ್ನು ಮರೆಯಲಾಗದು.

೩) **ಸತ್ಯ** : ಸಜ್ಜನರಿಗೆ ಹಿತವಾಗುವ ನುಡಿಗಳೇ ಸತ್ಯವೆನಿಸುತ್ತವೆ. ಸ್ತ್ರೀಯು ಎಲ್ಲ ಸಜ್ಜನರಿಗೆ ಹಿತಕರವಾಗುವ ಸತ್ಯ ಮಾತುಗಳನ್ನೇ ಆಡುತ್ತಿರಬೇಕು. ಈ ಸತ್ಯ ನುಡಿಯುವುದೇ ಅವಳಿಗೆ ಆಭರಣವೆನಿಸಿದೆ.

೪) **ಆರ್ಜವ** : ಕೃತಿ, ಮಾತು, ಮನಸ್ಸು, ಈ ಮೂರರಲ್ಲಿ ಒಂದೇ ರೀತಿಯಾಗಿರುವುದೇ 'ಅರ್ಜವ' ವೆನಿಸುತ್ತದೆ. ಸ್ತ್ರೀಯು ಸತ್ಯ, ಸದ್ವಿಚಾರ, ಸತ್ಕೃತಿಗಳನ್ನು ತನ್ನ ಆಭರಣಗಳನ್ನಾಗಿ ಮಾಡಿಕೊಳ್ಳಬೇಕು.

೫) **ಧರ್ಮ** : ಸ್ತ್ರೀಗೆ ಧರ್ಮವೇ ಜೀವನದ ಉಸಿರಾಗಿರಬೇಕು. ಅವಳು ಧರ್ಮಾಚರಣೆಯನ್ನು ತನ್ನ ಆಭರಣವನ್ನಾಗಿ ಮಾಡಿಕೊಂಡು ಜೀವನ ನಡೆಸಬೇಕು.

೬) **ಮಧುರತೆ (ಮಾಧುರ್ಯ)** : ಮಧುರವಾದ ಪದಾರ್ಥವು ಅದನ್ನು ಸೇವಿಸುವವರಿಗೆ ಆನಂದದಾಯಕವಾಗುವಂತೆ ಸ್ತ್ರೀಯು ಮಧುರ ಸ್ವಭಾವ (ಸ್ನೇಹಸಿಕ್ತ) ದಿಂದ ಕುಟುಂಬದಲ್ಲಿ ಎಲ್ಲರಿಗೂ ಆನಂದವನ್ನುಂಟುಮಾಡಬೇಕು. ಇಂಥ ಆಭರಣವನ್ನು ಸ್ತ್ರೀಯು ಯಾವಾಗಲೂ ಧರಿಸಿರಬೇಕು.

೭) **ಅಂತರ್ಬಾಹ್ಯ ಶುದ್ಧತ್ವ** : ಸ್ತ್ರೀಯು ಪವಿತ್ರವಾದ ವಿಚಾರ, ಆಚರಣೆಗಳಿಂದ ಅಂತಃ ಶುದ್ಧತ್ವವನ್ನೂ, ಕಾಯೇನ, ವಾಚಾ, ಮನಸಾ ಪರಪುರುಷರ ಸಂಪರ್ಕ ಮಾಡದೇ, ಅಂಗಪ್ರದರ್ಶನ, ಅಪವಿತ್ರಮಾತು ಇತ್ಯಾದಿಗಳಿಂದ ದೂರವಿದ್ದು ಬಾಹ್ಯ ಶುದ್ಧತ್ವವನ್ನೂ ಕಾಯ್ದುಕೊಳ್ಳಬೇಕು. ಇದು ಸ್ತ್ರೀಯ ಅತಿಮುಖ್ಯವಾದ ಆಭರಣವೆನಿಸಿದೆ.

೮) **ಪಿತುರ್ಭಾವ** : ಸಂತಾನ ರಕ್ಷಣೆ ಹಾಗೂ ಪತಿಯ ರಕ್ಷಣೆ ಪೋಷಣೆ ಮಾಡುತ್ತಿರುವುದೇ ಪಿತುರ್ಭಾವವೆನಿಸಿದೆ. ಶರೀರ ರಕ್ಷಣೆ ಪುರುಷನದಾಗಿದ್ದರೂ, ಅನ್ಯಸಕಲ ರಕ್ಷಣೆಯು ಸ್ತ್ರೀಯನ್ನೇ ಅವಲಂಬಿಸಿದೆ. ಪತಿಯನ್ನು ಮಗುವಿನಂತೆ ಕಾಣುವ ಅವಶ್ಯಕತೆ ಸ್ತ್ರೀ ಜೀವನದಲ್ಲಿದೆ. ಆದ್ದರಿಂದ 'ಋಗ್ವೇದ'ದಲ್ಲಿ 'ದಶಾಸ್ಯಾಂ ಪುತ್ರಮಾದೇಹಿ ಪತಿಮೇಕಾದಶಂಕೃಧಿ' ಎಂದು ಹೇಳಲಾಗಿದೆ.

೯) **ಶುಶ್ರೂಷಾ :** ಸ್ತ್ರೀಯಾದವಳು ತನ್ನ ಸ್ವಾರ್ಥವನ್ನು ತ್ಯಜಿಸಿ, ತನ್ನ ಭಾವನೆಗಳನ್ನು ಬದಿಗೊತ್ತಿ, ಕುಟುಂಬದ ಎಲ್ಲ ಸದಸ್ಯರ ಸುಖಸಮೃದ್ಧಿಗಾಗಿ ಸೇವೆಯನ್ನು ಮಾಡುವುದೇ ಶುಶ್ರೂಷೆ ಎನಿಸುತ್ತದೆ. ಈ ಆಭರಣವು ಸ್ತ್ರೀಯನ್ನು ಉನ್ನತಮಟ್ಟಕ್ಕೆ ಒಯ್ಯುತ್ತದೆ. ಜೀವನದಲ್ಲಿ ಸಾರ್ಥಕತೆಯನ್ನು ತಂದುಕೊಡುತ್ತದೆ.

೧೦) **ಸಹನಶೀಲತೆ :** ಜೀವನವನ್ನು ನಿರಾತಂಕವಾಗಿ ನಡೆಸಿ ಭಗವಂತನ ಅನುಗ್ರಹಕ್ಕೆ ಪಾತ್ರಳಾಗಬೇಕೆಂಬ ಸ್ತ್ರೀಯು ಸಹನಶೀಲತೆಯನ್ನು ಮೈಗೂಡಿಸಿಕೊಳ್ಳಬೇಕು. ಈ ಆಭರಣವಿಲ್ಲದ ಸ್ತ್ರೀಯು ಮನೆಗೆ ಹಾಗೂ ಸಮಾಜಕ್ಕೆ ಮಾರಿಯಾಗುತ್ತಾಳೆ. "ಕ್ಷಮಯಾಧರಿತ್ರೀ" ಎಂಬುದಾಗಿ ಹೇಳುವಂತೆ ಅವಳು ಸಹನಶೀಲತೆಯ ಸಾಕಾರ ಮೂರ್ತಿಯಾಗಿರಬೇಕು.

೧೧) **ರತಿ :** ರತಿ ಎಂದರೆ ಆಸಕ್ತಿ. ಸ್ತ್ರೀಯು ಮನೆಯಲ್ಲಿ ಪತಿ ಹಾಗೂ ಪುತ್ರಾದಿಗಳಿಗೆ ಅವರವರ ಕರ್ತವ್ಯದಲ್ಲಿ ಆಸಕ್ತಿ ಹುಟ್ಟಿಸಿ, ತಾನೂ (ಆಸಕ್ತಿ) ರತಿ ಗುಣವನ್ನು ಹೊಂದಿ ಕರ್ತವ್ಯವನ್ನು ಚೆನ್ನಾಗಿ ನಿಭಾಯಿಸಬೇಕು.

೧೨) **ಪಾತಿವ್ರತ್ಯ :** ಪತಿಯಲ್ಲಿಯೇ ಅನುರಕ್ತಳಾಗಿದ್ದು, ಪತಿಯು ಪಾಪಕಾರ್ಯಗಳಲ್ಲಿ ಪ್ರವೃತ್ತನಾಗದಂತೆ ನೋಡಿಕೊಂಡು ಅವನೊಂದಿಗೆ ಸ್ನೇಹ, ಸೌಹಾರ್ದ್ರತೆಯಿಂದ ಇದ್ದು ಪತಿಯಲ್ಲಿಯೇ ಭಗವಂತನನ್ನು ಕಾಣುವುದು ಸ್ತ್ರೀಗೆ ಎಲ್ಲ ಆಭರಣಗಳಿಗಿಂತಲೂ ಶ್ರೇಷ್ಠವಾದ ಆಭರಣವೆನಿಸಿದೆ.

ಈ ಹನ್ನೆರಡು ಆಭರಣಗಳನ್ನು ಧರಿಸಿ ಕನ್ಯೆಯಾದವಳು ಸುಖ, ಶಾಂತಿಗಳಿಂದ ಸಮೃದ್ಧವಾದ ಗೃಹವನ್ನು ನಿರ್ಮಿಸುವುದರಲ್ಲಿ ಶ್ರಮಿಸಿದರೆ ಅವಳು ಭಗವಂತನ ಅನುಗ್ರಹಕ್ಕೆ ಪಾತ್ರಳಾಗುವುದರಲ್ಲಿ ಸಂದೇಹವಿಲ್ಲ.

– ⊙ –

# ಕನ್ಯಾದಕ್ಷಿಣೆ - ವರದಕ್ಷಿಣೆ ಎರಡೂ ತ್ಯಾಜ್ಯ

ಲೋಕದಲ್ಲಿ ವರದಕ್ಷಿಣೆ ತೆಗೆದುಕೊಳ್ಳುವದು ತುಂಬಾ ಮಾಮೂಲಾಗಿಬಿಟ್ಟಿದೆ. ಕನ್ಯಾದಾನ ಮಾಡುವವರು ತಾವು ಮಾಡುವ ದಾನದ ಸಾಫಲ್ಯಕ್ಕಾಗಿ ದಕ್ಷಿಣೆಯನ್ನು ವರನಿಗೆ ಕೊಡಬೇಕು ಇದು ನಿಜವೇ. ಆದರೆ ವರನಿಗೆ ಕೊಡುವ ದಕ್ಷಿಣೆಯು ಕನ್ಯೆಯ ತಂದೆಯಾದವನು ತನ್ನ ಯೋಗ್ಯತೆಗೆ ಅನುಸಾರವಾಗಿ ಸ್ವಸಂತೋಷದಿಂದ ಕೊಡುವ ಧನವಾಗಿದೆ. ಇನ್ನು ದಾನ ತೆಗೆದುಕೊಳ್ಳುವ ವರನು ನನಗೆ ಇಂತಿಷ್ಟು ದಕ್ಷಿಣೆ ಕೊಡು ಎಂಬುದಾಗಿ ಕೇಳಕೂಡದು. ಹಾಗೆ ಕೇಳಲು ಅವನಿಗೆ ಅಧಿಕಾರವಿಲ್ಲ. ನನಗೆ ಕೊಡು ಎಂದು ಬೇಡಿ ತೆಗೆದುಕೊಂಡುದುದು 'ದಕ್ಷಿಣೆ' ಎನಿಸುವುದೇ ಇಲ್ಲ. ಹೊರತು 'ಭಿಕ್ಷೆ' ಎನಿಸುತ್ತದೆ. ಹಾಗಾಗಿ ವರದಕ್ಷಿಣೆಯನ್ನು ಕಾಡಿ ಬೇಡಿ ಕನ್ಯಾ ಪಕ್ಷದವರಿಂದ ತೆಗೆದುಕೊಳ್ಳುವುದು ಅಶಾಸ್ತ್ರೀಯವಾಗಿದೆ.

ಈಶಾವಾಸ್ಯೋಪನಿಷತ್ತು ಹೀಗೆ ಹೇಳುತ್ತದೆ-

"ಮಾಗೃಧಃ ಕಸ್ಯಸ್ವಿದ್ಧನಮ್"

ಭಗವಂತನು ಅವರವರ ಯೋಗ್ಯತೆ, ಅನಾದಿ ಕರ್ಮ, ಪ್ರಯತ್ನ ಇವುಗಳಿಗೆ ಅನುಸಾರವಾಗಿ ಸಂಪತ್ತನ್ನು ಕೊಟ್ಟೇ ಕೊಡುತ್ತಾನೆ, ಅದಕ್ಕಾಗಿ ಇನ್ನೊಬ್ಬರ ಹತ್ತಿರ ಕೈಚಾಚುವ ಕಾರಣವಿಲ್ಲ. ಇನ್ನೊಬ್ಬರ ಹಣಕ್ಕಾಗಿ ಆಸೆಪಡುವುದು ಸರಿಯಲ್ಲ.

ಶ್ರೀಸ್ಕಂದ ಮಹಾಪುರಾಣವು ಹೀಗೆ ತಿಳಿಸುತ್ತದೆ-

ಕನ್ಯಾಪಿತನು ಸ್ವಸಂತೋಷದಿಂದ ಮಗಳ ಮೇಲಿನ ಮಮತೆಯಿಂದ ವಸ್ತ್ರ, ಆಭರಣ, ಅಲಂಕಾರಗಳನ್ನು ಕನ್ಯೆಗೆ ಇಟ್ಟು, ದಕ್ಷಿಣೆ ಪುರಸ್ಸರವಾಗಿ ವರನಿಗೆ ಕೊಡಬೇಕು.

ಆದರೆ ಅದು ಕಡ್ಡಾಯ, ಕರಾರು ಅಲ್ಲ. ಒಂದು ವೇಳೆ ವರದಕ್ಷಿಣೆಯು ಕಡ್ಡಾಯವಾಗಿಬಿಟ್ಟರೆ ಅದು ಅತ್ಯಂತ ನಿಷಿದ್ಧವೂ, ಅಧರ್ಮವೂ, ಪಾಪಜನಕವೂ ಆಗುತ್ತದೆ.

ಇನ್ನು ವರದಕ್ಷಿಣೆ ಪದ್ಧತಿಯನ್ನು ವರದಕ್ಷಿಣೆ ನಿಷೇಧ ಕಾಯಿದೆ ೧೯೬೧, ನಿಷೇಧ ಮಾಡಿದೆ. ಯಾವುದೇ ಸಾಮಾನ್ಯ ನಾಗರಿಕನು ವರದಕ್ಷಿಣೆಯನ್ನು ಪಡೆಯದಂತೆ ಸಾರ್ವತ್ರಿಕವಾಗಿ ನಿಷೇಧಿಸಲಾಗಿದೆ.

'ವರದಕ್ಷಿಣೆ' ಕೊಟ್ಟಿಲ್ಲವೆಂಬ ಕಾರಣದಿಂದ ಅನೇಕ ಮನೆಯವರು 'ಕನ್ಯೆ'ಯ ಮೇಲೆ ದೌರ್ಜನ್ಯ ನಡೆಸಿ ಹಿಂಸೆಕೊಡುವುದು ಇತ್ತೀಚೆಗೆ ತುಂಬಾ ಬೆಳಕಿಗೆ ಬಂದಿದೆ. ಇದು ಸಮಾಜದ ದೃಷ್ಟಿಯಿಂದಲೂ ಅನಿಷ್ಟಕಾರಕವೇ ಆಗಿದೆ.

ವರದಕ್ಷಿಣೆ ನಿಷೇಧ ಕಾಯಿದೆ ೧೯೬೧ ರ ಪ್ರಕಾರ ಕನ್ಯೆಯ ಬಂಧುಗಳು, ಪಿತನು ನೀಡಬಹುದಾದ ಉಡುಗೊರೆ, ಇತ್ಯಾದಿಗಳು ವರದಕ್ಷಿಣೆಯ ವ್ಯಾಪ್ತಿಗೆ ಬರುವದಿಲ್ಲ.

ವಿವಾಹಿತ ಕನ್ಯೆಯೊಬ್ಬಳು ಮದುವೆಯಾದ ದಿನದಿಂದ ಏಳು ವರ್ಷಗಳೊಳಗಾಗಿ ಆತ್ಮಹತ್ಯೆ ಮಾಡಿಕೊಂಡಲ್ಲಿ, ಆಕೆಯ ಗಂಡ ಅಥವಾ ಸಂಬಂಧಿಯ ಹಿಂಸೆಯಿಂದಾಗಿ ಆತ್ಮಹತ್ಯೆ ಘಟಿಸಿದ್ದರೆ, ನ್ಯಾಯಾಲಯವು ಆಕೆಯ ಆತ್ಮಹತ್ಯೆಗೆ ಪತಿ ಅಥವಾ ಸಂಬಂಧಿಯೇ ಕಾರಣರೆಂದು ಪೂರ್ವಭಾವನೆ ಹೊಂದಬಹುದೆಂದು ಭಾರತೀಯ ಸಾಕ್ಷ್ಯ ಅಧಿನಿಯಮದ ಕಲಂ ೧೧೩ಎ ಸ್ಪಷ್ಟಪಡಿಸುತ್ತದೆ.

ಮನುಸ್ಮೃತಿಯಲ್ಲಿ ತಿಳಿಸಿದಂತೆ- ಆರ್ಷ ವಿವಾಹದಲ್ಲಿ ಎರಡು ಗೋವುಗಳನ್ನು (ಒಂದು ಎತ್ತು, ಒಂದು ಆಕಳು) ವರನಿಂದ ತೆಗೆದುಕೊಳ್ಳುವ ಸಂಪ್ರದಾಯವಿದ್ದರೂ ಅದು ಶುಲ್ಕ ಅಥವಾ ಕರಾರಿನ ರೂಪದಲ್ಲಿದ್ದರೆ ಅದು ನಿಷಿದ್ಧವೇ ಆಗಿದೆ. ಕನ್ಯೆಯನ್ನು ಹಣತೆಗೆದುಕೊಂಡು ವಿವಾಹ ಮಾಡಿಕೊಟ್ಟದ್ದಾದರೆ ಕನ್ಯಾವಿಕ್ರಯ ರೂಪವಾದ ಅದು ಮಹಾಪಾಪವೆನಿಸಿ ಮನುಷ್ಯನು ಒಂದು ಕಲ್ಪಕಾಲದ ವರೆಗೆ 'ಕ್ರಿಮಿಭೋಜನ' ಎಂಬ ನರಕದಲ್ಲಿ ಕೊಳೆಯಬೇಕಾಗುತ್ತದೆ.

ಇಂಥ ಕನ್ಯಾದಕ್ಷಿಣೆ, ವರದಕ್ಷಿಣೆ ತೆಗೆದುಕೊಂಡು ಮಾಡುವ ವಿವಾಹಗಳಿಂದ ವಧು, ವರ ಪಕ್ಷದವರಿಬ್ಬರೂ ಧರ್ಮಭ್ರಷ್ಟರಾಗುತ್ತಾರೆ ಸಂದೇಹವಿಲ್ಲ.

– ⊙ –

# ವಿವಾಹದ ಪ್ರಕಾರಗಳು

ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಅಸುರ, ಗಂಧರ್ವ, ರಾಕ್ಷಸ ಮತ್ತು ಪೈಶಾಚ ಎಂಬ ಎಂಟು ಬಗೆಯ ವಿವಾಹಗಳನ್ನು ಮನುಸ್ಮೃತಿಕಾರರು ತಿಳಿಸಿದ್ದಾರೆ.[೧]

ವಿದ್ಯಾವಂತನೂ ಶೀಲವಂತನೂ ಆದ ವರನನ್ನು ಕನ್ಯಾಪಿತೃವು ತಾನಾಗಿ ಕರೆದು ಉತ್ತಮವಾದ ಬಟ್ಟೆಗಳನ್ನು ಉಡಿಸಿ ಅಲಂಕಾರಾದಿಗಳಿಂದ ಪೂಜಿಸಿ, ಅಲಂಕೃತಳಾದ ಕನ್ಯೆಯನ್ನು ಆತನಿಗೆ ದಾನವಾಗಿ ಕೊಡುವುದು ಬ್ರಾಹ್ಮವಿವಾಹ ವೆನಿಸುತ್ತದೆ.[೨]

ಜ್ಯೋತಿಷ್ಟೋಮ ಮೊದಲಾದ ವಿಧಿಪ್ರಕಾರ ಯಜ್ಞಕರ್ಮ ಮಾಡುವ ಬ್ರಾಹ್ಮಣನಿಗೆ ಸಾಲಂಕೃತ ಕನ್ಯೆಯನ್ನು ದಾನಮಾಡುವುದು ದೈವವಿವಾಹವೆನಿಸುತ್ತದೆ.[೩]

ವರನಿಂದ ಒಂದು ಅಥವಾ ಎರಡು ಜೋಡಿ ಆಕಳುಗಳನ್ನು ಪಡೆದುಕೊಂಡು ಶಾಸ್ತ್ರವಿಧಿ ಪ್ರಕಾರ ಕನ್ಯಾದಾನ ಮಾಡುವುದು ಆರ್ಷ ವಿವಾಹವೆನಿಸುತ್ತದೆ.[೪]

ನೀವಿಬ್ಬರೂ ಜೊತೆಯಾಗಿ ಧರ್ಮಾಚರಣೆ ಮಾಡಿರಿ ಎಂದು ಹೇಳಿ ಯಥಾನುಕೂಲವಾಗಿ ಸತ್ಕರಿಸಿ ಕನ್ಯಾದಾನ ಮಾಡಿಕೊಡುವುದು ಪ್ರಾಜಾಪತ್ಯ ವಿವಾಹವೆನಿಸುತ್ತದೆ.[೫]

---

೧) ಬ್ರಾಹ್ಮೋದೈವಸ್ತಥೈವಾರ್ಷಃ ಪ್ರಾಜಾಪತ್ಯಸ್ತಥಾಪುರಃ ।
ಗಾಂಧರ್ವೋ ರಾಕ್ಷಸಶ್ಚೈವ ಪೈಶಾಚಾಶ್ಚಾಷ್ಟಮೋಽಧಮಃ ॥ (೩-೨೧) ಮನುಸ್ಮೃತಿ

೨) ಆಚ್ಛಾದ್ಯ ಚಾರ್ಚಯಿತ್ವಾಚ ಶ್ರುತಿಶೀಲವತೇ ಸ್ವಯಮ್ ।
ಆಹೂಯ ದಾನಂ ಕನ್ಯಾಯಾ ಬ್ರಾಹ್ಮೋ ಧರ್ಮಃ ಪ್ರಕೀರ್ತಿತಃ ॥ (೩-೨೭)

೩) ಯಜ್ಞೇತು ವಿತತೇ ಸಮ್ಯಗ್ ಋತ್ವಿಜೇ ಕರ್ಮಕುರ್ವತೇ ।
ಅಲಂಕೃತ್ಯ ಸುತಾದಾನಂ ದೈವಂ ಧರ್ಮಂ ಪ್ರಚಕ್ಷತೇ ॥ (೩-೨೮)

೪) ಏಕಂ ಗೋಮಿಥುನಂ ದ್ವೇವಾ ವರಾದಾದಾಯ ಧರ್ಮತಃ ।
ಕನ್ಯಾ ಪ್ರದಾನಂ ವಿಧಿವದಾರ್ಷೋ ಧರ್ಮಃ ಸ ಉಚ್ಯತೇ ॥ (೩-೨೯)

೫) ಸಹೋಭೌಚರತಾಂ ಧರ್ಮಮಿತಿ ವಾ ಚಾನುಭಾಷ್ಯ ಏವ ಚ ।
ಕನ್ಯಾಪ್ರದಾನಮಭ್ಯರ್ಚ್ಯ ಪ್ರಾಜಾಪತ್ಯೋ ವಿಧಿಃ ಸ್ಮೃತಃ ॥ (೩-೩೦)

ವರನು ಕನ್ಯಾಬಂಧುಗಳಿಗೂ ಕನ್ಯೆಗೂ ಶಕ್ತ್ಯಾನುಸಾರ ಹಣವನ್ನು ಕೊಟ್ಟು ತನ್ನ ಇಚ್ಛೆಯ ಪ್ರಕಾರ ಕನ್ಯೆಯನ್ನು ಮದುವೆ ಮಾಡಿಕೊಳ್ಳುವದು ಅಸುರ ವಿವಾಹವೆನಿಸುತ್ತದೆ.[೬]

ಕನ್ಯೆ ಹಾಗೂ ವರನ ಸ್ವೇಚ್ಛೆಯಿಂದ ಪರಸ್ಪರ ಪ್ರೀತ್ಯಾಭಿಲಾಷೆಯಿಂದ ಉಂಟಾದ ಆಲಿಂಗನಾದಿ ಸಂಸರ್ಗವು ಗಾಂಧರ್ವ ವಿವಾಹವೆನಿಸುತ್ತದೆ.[೭]

ಕನ್ಯೆಗೆ ಇಷ್ಟವಿಲ್ಲದಿದ್ದರೂ, ಅಳುತ್ತಿದ್ದರೂ, ತಡೆಯುವವರಿದ್ದರೂ, ಅವರನ್ನು ಕೊಂದು ಅಥವಾ ಗಾಯಗೊಳಿಸಿ ಅಳುತ್ತಿರುವ ಕನ್ಯೆಯನ್ನು ಆಕೆಯ ಮನೆಯಿಂದ ಬಲಾತ್ಕಾರವಾಗಿ ಅಪಹರಿಸುವದು ರಾಕ್ಷಸ ವಿವಾಹವೆನಿಸುತ್ತದೆ.[೮]

ನಿದ್ರಿಸುತ್ತಿರುವ ಅಥವಾ ಮದ್ಯಪಾನದಿಂದ ಮದವೇರಿದ ಅಥವಾ ತನ್ನ ಶೀಲವನ್ನು ಕಾಯ್ದುಕೊಳ್ಳದೇ ಅಜಾಗ್ರತೆಯಿಂದಿರುವ ಕನ್ಯೆಯೊಡನೆ ಏಕಾಂತದಲ್ಲಿ ಸಂಸರ್ಗಮಾಡಿ, ಅದೇ ಕಾರಣಕ್ಕಾಗಿ ವಿವಾಹ ಮಾಡಿಕೊಂಡರೆ ಅದು ಪೈಶಾಚ ವಿವಾಹ ವೆನಿಸುತ್ತದೆ.[೯]

ಬ್ರಾಹ್ಮಣನಿಗೆ ಬ್ರಾಹ್ಮ, ಆರ್ಷ, ದೈವ, ಪ್ರಾಜಾಪತ್ಯ ಈ ನಾಲ್ಕು ವಿಧ ವಿವಾಹಗಳು ಪ್ರಶಸ್ತವೆಂದು ಜ್ಞಾನಿಗಳು ತಿಳಿಯುತ್ತಾರೆ. ಕ್ಷತ್ರಿಯರಿಗೆ ರಾಕ್ಷಸ, ವೈಶ್ಯ, ಶೂದ್ರರಿಗೆ ಅಸುರ ವಿವಾಹವು ಪ್ರಶಸ್ತವೆಂದು ಹೇಳಲಾಗಿದೆ.[೧೦]



---

೬) ಜ್ಞಾತಿಭ್ಯೋ ದ್ರವಿಣಂ ದತ್ವಾ ಕನ್ಯಾಯೈ ಚೈವ ಶಕ್ತಿತಃ ।
ಕನ್ಯಾಪ್ರದಾನಂ ಸ್ವಾಚ್ಛಂದ್ಯಾದಾಸುರೋ ಧರ್ಮ ಉಚ್ಯತೇ ॥ (೩-೩೧)

೭) ಇಚ್ಛಯಾಽನ್ಯೋನ್ಯ ಸಂಯೋಗಃ ಕನ್ಯಾಯಾಶ್ಚ ವರಸ್ಯ ಚ ।
ಗಾಂಧರ್ವಃ ಸತು ವಿಜ್ಞೇಯೋ ಮೈಥುನ್ಯಃ ಕಾಮಸಂಭವಃ ॥ (೩-೩೨)

೮) ಹತ್ವಾ ಛಿತ್ವಾ ಚ ಭಿತ್ವಾಚ ಕ್ರೋಶಂತೀಂ ರುದತೀಂ ಗೃಹಾತ್ ।
ಪ್ರಸಹ್ಯ ಕನ್ಯಾಹರಣಂ ರಾಕ್ಷಸೋ ವಿಧಿರುಚ್ಯತೇ ॥ (೩-೩೩)

೯) ಸುಪ್ತಾಂ ಮತ್ತಾಂ ಪ್ರಮತ್ತಾಂ ವಾ ರಹೋ ಯತ್ರೋಪಗಚ್ಛತಿ ।
ಸ ಪಾಪಿಷ್ಠೋ ವಿವಾಹಾನಾಂ ಪೈಶಾಚಶ್ಚಾಷ್ಟಮೋಽಧಮಃ ॥ (೩-೩೪)

೧೦) ಚತುರೋ ಬ್ರಾಹ್ಮಣಸ್ಯಾದ್ಯಾನ್ ಪ್ರಶಸ್ತಾನ್ ಕವಯೋ ವಿದುಃ ।
ರಾಕ್ಷಸಂ ಕ್ಷತ್ರಿಯಸ್ಯೈಕಮಾಸುರಂ ವೈಶ್ಯ ಶೂದ್ರಯೋಃ ॥ (೩-೨೪)

# ವಿವಾಹಪೂರ್ವದಲ್ಲಿ ತಂದೆ ತಾಯಿಗಳ ಕರ್ತವ್ಯಗಳು

ವಿವಾಹಪೂರ್ವದಲ್ಲಿ ವರನ, ವಧುವಿನ ತಂದೆ ತಾಯಿಗಳು ಜ್ಯೋತಿಷ್ಯ ಶಾಸ್ತ್ರ ಬಲ್ಲವರ ಹತ್ತಿರ ಹೋಗಿ ವಧೂವರರ ಜಾತಕಗಳನ್ನು ಕೂಡಿಸಿ ನೋಡಬೇಕು.

ವಧು, ವರರು 'ಸಗೋತ್ರ'ದವರಾಗಿರಬಾರದು.[೧] ಸಗೋತ್ರದವರು ವಿವಾಹವಾದರೆ ಅಣ್ಣ, ತಂಗಿಯರು ವಿವಾಹವಾದಂತೆ ಎಂಬುದಾಗಿ ಶಾಸ್ತ್ರವು ಹೇಳುತ್ತದೆ. ಇದನ್ನು ತಂದೆ ತಾಯಿಗಳು ಅವಶ್ಯವಾಗಿ ಮನದಲ್ಲಿಡಬೇಕು.

ಜಾತಕವೆಂದರೆ ಮಾನವನ ದೈಹಿಕ ಮಾನಸಿಕಸ್ಥಿತಿ ಇತ್ಯಾದಿಗಳ ಇತಿಹಾಸವಾಗಿದೆ. ಒಳ್ಳೆಯ ಜ್ಯೋತಿಷಿಯಾದವನು ಅವರ ಜಾತಕ (ಕುಂಡಲಿ) ನೋಡಿದ ಕೂಡಲೇ ಆಯಾ ವಧು, ವರರ ನಡತೆ, ಭಾಗ್ಯ, ದಾಂಪತ್ಯ ಜೀವನದ ಕುರಿತು ಚೆನ್ನಾಗಿ ಮಾಹಿತಿ ನೀಡುತ್ತಾನೆ. ಒಬ್ಬ ಒಳ್ಳೆಯ ಡಾಕ್ಟರ ಅಥವಾ ಮನೋವಿಜ್ಞಾನಿಯಂತೆ Case History ನೋಡಿ ವಧು ವರರ ಜಾತಕ ನೋಡಿ ಇವರಿಬ್ಬರ ಮದುವೆ ಮಾಡಬೇಕೋ, ಮಾಡಬಾರದೋ ಎಂಬ ನಿರ್ಣಯವನ್ನು ಜ್ಯೋತಿಷಿಯು ಕೊಡುತ್ತಾನೆ. ಎಷ್ಟು ಗುಣಗಳು ಕೂಡಿ ಬರುತ್ತವೆ ತಿಳಿಸುತ್ತಾನೆ. ಕನಿಷ್ಠ ೧೮ ಗುಣ ಕೂಡಿ ಬರಬೇಕು. ಗುಣಗಳ ಜೊತೆಗೆ ಗಣ, ಯೋನಿ, ಕೂಟಗಳನ್ನು ಕುರಿತು ಸರಿಯಾಗಿ ತಿಳಿದುಕೊಳ್ಳುವದು ಅವಶ್ಯವಾಗಿದೆ.

ಮನುಷ್ಯಗಣ, ರಾಕ್ಷಸಗಣ, ದೇವಗಣ ಇತ್ಯಾದಿಗಳಿಂದ ವಧೂವರರ ಸ್ವಭಾವವು ತಿಳಿದುಬರುತ್ತದೆ. ಹಾಗಾಗಿ ಇವುಗಳ ಕುರಿತು ಸರಿಯಾದ ಮಾಹಿತಿ ಪಡೆದು ಮುಂದುವರಿಯುವದು ಒಳಿತು.

ವಧೂವರರಿಗೆ ಗುರು ರವಿಬಲಗಳನ್ನು ಕೂಡ ನೋಡಬೇಕು.

ಮುಖ್ಯಂ ಗುರುಬಲಂ ವಧ್ವಾಃ ವರಸ್ಯೇಷ್ಟಂ ರವೇರ್ಬಲಂ ।

---

೧) ಅನನ್ಯ ಪೂರ್ವಿಕಾಂತಾಂ ತಾಂ ಅಸಪಿಂಡಾಂ ಯವೀಯಸೀಂ ।
ಅರೋಗಿಣೀಂ ಭ್ರಾತೃಮತೀಮಸಮಾನಾರ್ಷಗೋತ್ರಜಾಂ ॥ ಯಾಜ್ಞವಲ್ಕ್ಯಸ್ಮೃತಿ
ಹಿಂದೆ ಇನ್ನೊಬ್ಬ ಪುರುಷನೊಂದಿಗೆ ವಿವಾಹವಾಗದಿರುವ ಸಪಿಂಡರಲ್ಲದ ಸಮಾನಗೋತ್ರದ ಪ್ರವರರಲ್ಲದ, ತನಗಿಂತ ಚಿಕ್ಕವಳಾಗಿರುವ, ರೋಗಿಯಲ್ಲದ, ಸಹೋದರರಿರುವ ವಧುವನ್ನು ವಿವಾಹ ಮಾಡಿಕೊಳ್ಳಬೇಕು.

ಉಕ್ತಿಯಂತೆ ವಧುವಿಗೆ ಗುರುಬಲವೇ ಮುಖ್ಯ. ವರನಿಗೆ ರವಿಬಲವೇ ಮುಖ್ಯ. ಇದನ್ನು ತಿಳಿದು ಕಾರ್ಯ ಪ್ರವೃತ್ತರಾಗಬೇಕು.

ಪಿತನು, ಪಿತಾಮಹನು, ಭ್ರಾತೃವು ಪಿತನ ಕುಲದಲ್ಲಿರುವವರು, ಕನ್ಯೆಯ ತಾಯಿಯು ಇವರಿಗೆ ಕ್ರಮದಿಂದ ಕನ್ಯಾದಾನದ ಅಧಿಕಾರವಿದೆ.[೨]

ಒಂದೇ ತಾಯಿಯಲ್ಲಿ ಹುಟ್ಟಿದ ಮಕ್ಕಳಲ್ಲಿ ಜ್ಯೇಷ್ಠರನ್ನು ಬಿಟ್ಟು ಕನಿಷ್ಠರ ವಿವಾಹ ಮಾಡಬಾರದು. ಜ್ಯೇಷ್ಠನು ದೇಶಾಂತರಕ್ಕೆ ಹೋಗಿದ್ದರೆ, ಪತಿತನಾಗಿದ್ದರೆ, ಅಂಗವಿಕಲನಾದರೆ ಆ ಪ್ರಸಂಗದಲ್ಲಿ ಕನಿಷ್ಠನಿಗೆ ಮದುವೆ ಮಾಡಬಹುದು. ಇಲ್ಲದಿದ್ದರೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಜ್ಯೇಷ್ಠಳ ವಿಷಯದಲ್ಲಿಯೂ ಇದನ್ನೇ ಅನುಸರಿಸಬೇಕು.

ವಧೂವರರಿಬ್ಬರ ಜಾತಕಗಳನ್ನೂ ತೋರಿಸಿ, ಜ್ಯೋತಿಷ್ಕರು ಹೇಳಿದ ಶುಭ ಮುಹೂರ್ತದಲ್ಲಿ ವಿವಾಹವನ್ನು ನೆರವೇರಿಸಬೇಕು.



೨) ಪಿತಾ ಪಿತಾಮಹೋ ಭ್ರಾತಾ ಸಕುಲ್ಯೋ ಜನನೀ ತಥಾ ।
ಕನ್ಯಾಪ್ರದಃ ಪೂರ್ವನಾಶೇ ಪ್ರಕೃತಿಸ್ಥಃ ಪರಃ ಪರಃ ॥ ಯಾಜ್ಞವಲ್ಕ್ಯಸ್ಮೃತಿ

# ಕನ್ಯಾದಾನದ ಫಲ

ಶ್ರೀಪದ್ಮಮಹಾಪುರಾಣದಲ್ಲಿ ಕನ್ಯಾದಾನದ ಫಲವನ್ನು ಸುಂದರವಾಗಿ ನಿರೂಪಿಸಿದ್ದಾರೆ.

ಸರ್ವಾಭರಣಗಳಿಂದ ಕೂಡಿದ ಕನ್ಯೆಯನ್ನು ದಾನ ಮಾಡಿದರೆ ಪರ್ವತ, ವನ, ಕಾಡುಗಳಿಂದ ಕೂಡಿದ ಭೂಮಿಯನ್ನು ದಾನ ಮಾಡಿದ ಫಲವು ದೊರೆಯುತ್ತದೆ.[೧]

ಆಭರಣಗಳನ್ನು ತೊಡಿಸಿ ದಾನಮಾಡಿದರೆ ದಾತೃವಿಗೆ ಪೂರ್ಣಫಲವು ಬರುತ್ತದೆ. ಆಭರಣವಿಲ್ಲದ ಕನ್ಯೆಯನ್ನು ದಾನ ಮಾಡಿದರೆ ಕಾಲುಭಾಗ ಫಲ ಬರುತ್ತದೆ.[೨]

ಕನ್ಯಾದಕ್ಷಿಣೆಯನ್ನು ತೆಗೆದುಕೊಂಡರೆ ನರಕ ಪ್ರಾಪ್ತಿಯಾಗುತ್ತದೆ. ಮಗಳನ್ನು ಮಾರಿದರೆ ತಂದೆಯಾದವನು ನರಕದಿಂದ ಹೊರಗೆ ಬರುವುದೇ ಇಲ್ಲ.[೩]

ಅಳಿಯನಾದವನು ಕೂಡ ಕನ್ಯಾಶುಲ್ಕವನ್ನು ತೆಗೆದುಕೊಳ್ಳಕೂಡದು. ದಾತೃವು ಒಂದು ವೇಳೆ ಕೊಟ್ಟರೆ ಅದಕ್ಕೆ ಅಕ್ಷಯ ಫಲವು ಬರುತ್ತದೆ.[೪]

ಸಗೋತ್ರದವರಾಗಲಿ, ಪರಗೋತ್ರದವರಾಗಲಿ, ಮದುವೆಯ ಸಮಯದಲ್ಲಿ ವರಕನ್ಯೆಯರಿಗೆ ಕಾಣಿಕೆಯಾಗಿ ಏನನ್ನು ಕೊಟ್ಟರೂ ಅದು ಅಕ್ಷಯ ಫಲಕೊಡುತ್ತದೆ.[೫]

---

೧) ಸರ್ವಾಭರಣ ಸಂಯುಕ್ತಾಂ ಕನ್ಯಕಾಂ ಯೋ ದದಾತಿ ಚ ।
ತೇನ ದತ್ತಾ ಧರಾ ಸರ್ವಾ ಸಶೈಲವನಕಾನನಾ ॥ (ಶ್ರೀ ಪದ್ಮಮಹಾಪುರಾಣ)

೨) ಅರ್ಥಾಭರಣದಾನೇನ ಫಲಂ ದಾತುರ್ಭವೇಧ್ರುವಂ ।
ಅನಾಭರಣಕನ್ಯಾಯಾಂ ಪಾದೈಕಸ್ಯ ಫಲಂ ಭವೇತ್ ॥ (ಶ್ರೀ ಪದ್ಮಮಹಾಪುರಾಣ)

೩) ಯಃ ಪುನಶ್ಶುಲ್ಕಮಶ್ನಾತಿ ಸ ಯಾತಿ ನರಕೇ ನರಃ ।
ವಿಕ್ರೀತ್ವಾಚಾತ್ಮಜಾಂ ಮೂಢೋ ನರಕಾನ್ನನಿವರ್ತತೇ ॥ (ಶ್ರೀ ಪದ್ಮಮಹಾಪುರಾಣ)

೪) ಅತ ಏವ ಹಿ ಶುಲ್ಕಂ ಚ ಜಾಮಾತುರ್ನಕದಾಚನ ।
ಗೃಹ್ಣಾತಿ ಮನಸಾ ಪ್ರಾಜ್ಞೋ ಯದ್ದತ್ತಂ ತಸ್ಯ ಚಾಕ್ಷಯಂ ॥
(ಶ್ರೀ ಪದ್ಮಮಹಾಪುರಾಣ)

೫) ವಿವಾಹ ಸಮಯೇ ಏವ ಸಗೋತ್ರ ಪರಗೋತ್ರಜೈಃ ।
ಯೌತಕಂ ದೀಯತೇ ಕಿಂಚಿತ್ ತತ್ಸರ್ವಂ ಅಕ್ಷಯಂ ಭವೇತ್ ॥
(ಶ್ರೀ ಪದ್ಮಮಹಾಪುರಾಣ)

ಆದ್ದರಿಂದ ವಿವಾಹ ಸಮಯದಲ್ಲಿ ಕನ್ಯಾದಾನ ಮಾಡುವವನು ವರನು ಕೇಳದಿದ್ದರೂ ಕಿಂಚಿತ್ ಕಾಣಿಕೆಯನ್ನು ವರನಿಗೆ ದಾನ ಕೊಡಬೇಕು. ಹಾಗೆ ಮಾಡದಿದ್ದರೆ ದಾಸರಾಗುತ್ತಾರೆ.[೬]

ಬಹಳ ತಿನ್ನುವವರಿಗೆ, ದೂರದಲ್ಲಿರುವವರಿಗೆ, ಬಡವನಿಗೆ, ಅತಿದುಷ್ಟನಿಗೆ ಕುಲಹೀನನಿಗೆ, ಮೂರ್ಖನಿಗೆ ಈ ಆರು ಜನರಿಗೆ ಕನ್ಯಾದಾನ ಮಾಡಬಾರದು.[೭]

ಬಹಳ ಮುದುಕನಾದವನಿಗೆ, ಬಹಳ ದುಃಖಿಗೆ, ರೋಗಿಗೆ, ಯಾವಾಗಲೂ ಸಂಚಾರದಲ್ಲಿರುವವನಿಗೆ, ಬಹುಕೋಪಿಗೆ, ಸಂತುಷ್ಟಿ ಇಲ್ಲದವನಿಗೆ ಈ ಆರು ಜನರಿಗೆ ಕನ್ಯಾದಾನ ಮಾಡಬಾರದು.[೮]

ಮುನಿಗಳಿಗೂ, ತಪಸ್ವಿಗಳಿಗೂ, ಜ್ಞಾನಿಗಳಿಗೂ ಯುವತಿಯಾದ, ರೂಪಶಾಲಿನಿಯಾದ, ಸಲಕ್ಷಣ ಕನ್ಯೆಯನ್ನು ಆಭರಣ ಅಲಂಕಾರ ಇಡಿಸಿ, (ಸಾಲಂಕೃತಳಾದ) ಶ್ರೇಷ್ಠ ಶಯ್ಯಾ ಸಾಮಗ್ರಿಗಳೊಡನೆ ಕನ್ಯಾದಾನ ಮಾಡಬೇಕು. ಇದರಿಂದ ಅನಂತಪುಣ್ಯ ಫಲವು ಪ್ರಾಪ್ತವಾಗುತ್ತದೆ. 'ಕನ್ಯಾದಾನವ ಮಾಡಿದ ಮನುಜಗೆ ಹೆಣ್ಣಿನ ಭೋಗವೇ ಸಾಕ್ಷಿ' ಎಂಬ ಶ್ರೀ ದಾಸರಾಯರ ಮಾತನ್ನು ಇಲ್ಲಿ ಸ್ಮರಿಸಬಹುದು.



೬) ದಾತೌ ಚ ಸ್ಮರತೇ ದಾನಂ ಪ್ರತಿಗ್ರಾಹೀ ನ ಯಾಚತೇ ।
ಅದತ್ವಾ ನರಕಂ ಪ್ರಾಪ್ಯ ದಾಸೀತ್ವಮುಪಗಚ್ಛತಿ ॥ (ಶ್ರೀ ಪದ್ಮಮಹಾಪುರಾಣ)

೭) ಅತ್ಯಶನೇ ವಿದೂರಸ್ಥೇ ಅನಾಢ್ಯೇ ಚಾತಿದುರ್ಜನೇ ।
ಕುಲಹೀನೇ ಚ ಮೂರ್ಖೇಚ ಷಟ್ಸುಕನ್ಯಾ ನ ದೀಯತೇ ॥
(ಶ್ರೀ ಪದ್ಮಮಹಾಪುರಾಣ)

೮) ಅತಿವೃದ್ಧೇಚಾತಿದೀನೇ ರೋಗಿಷ್ಟೇ ದೇಶಚಾರಿಣೇ ।
ಅತಿಕ್ರುದ್ಧೇ ಪ್ಯಸಂತುಷ್ಟೇ ಷಟ್ಸು ಕನ್ಯಾ ನ ದೀಯತೇ ॥ (ಶ್ರೀ ಪದ್ಮಮಹಾಪುರಾಣ)

# ಸಮಾವರ್ತನ

ಬ್ರಹ್ಮಚಾರಿಯು* ೧೨ ವರ್ಷಗಳ ಕಾಲ ಗುರುಕುಲದಲ್ಲಿ ಅಧ್ಯಯನಮಾಡಿ ಗುರುಗಳಿಗೆ ಇಚ್ಛಿತವಾದ ಗುರುದಕ್ಷಿಣೆಯನ್ನು ಕೊಟ್ಟು ಸಂತೋಷಪಡಿಸಿ ಅವರ ಅನುಜ್ಞೆ ಪಡೆದು ಗುರುಕುಲದಿಂದ ಹೊರಟುಬರುವ ಸಮಾರಂಭವೇ ಸಮಾವರ್ತನ[1]ವೆನಿಸುತ್ತದೆ.

ವೇದಾಧ್ಯಯನವೇ ಸ್ನಾನ.[2] ಆದರಿಂದ ಪರಿಶುದ್ಧನಾದವನು ಸ್ನಾತಕನು. ಗುರುಗಳಿಗೆ ಪ್ರಿಯವಾದ ದಕ್ಷಿಣೆಯನ್ನಿತ್ತು[3] ಬ್ರಹ್ಮಚಾರಿಯು ಸ್ವಗೃಹಕ್ಕೆ ತೆರಳುವಾಗ ಅವರ ಅನುಜ್ಞೆಯಿಂದ ಸ್ನಾನಮಾಡಬೇಕು. ಈ ವ್ರತಾಂತ ಸ್ನಾನಕ್ಕೆ 'ಸಮಾವರ್ತನ'ವೆಂದು ಹೆಸರು.[4]

ಸ್ನಾತಕರಲ್ಲಿ ವಿದ್ಯಾಸ್ನಾತಕ, ವ್ರತಸ್ನಾತಕ, ವಿದ್ಯಾವ್ರತ ಸ್ನಾತಕ ಎಂದು ಮೂರು ವಿಧ. ಯಾರು ವಿದ್ಯೆಯನ್ನು ಸಂಪೂರ್ಣ ಅಧ್ಯಯನ ಮಾಡಿ, ದ್ವಾದಶವರ್ಷಾದಿ ಬ್ರಹ್ಮಚರ್ಯಾವಧಿಯ ಮೊದಲು ಸ್ನಾನ ಮಾಡಿದವನಿಗೆ 'ವಿದ್ಯಾಸ್ನಾತಕ' ಎನ್ನುತ್ತಾರೆ. ಯಾರು ಬ್ರಹ್ಮಚರ್ಯವ್ರತವನ್ನು ಸಂಪೂರ್ಣವಾಗಿ ಆಚರಿಸಿ ವೇದಾಧ್ಯಯನ ಸಮಾಪ್ತಿಯಾಗುವ ಮೊದಲೇ ಸ್ನಾನ ಮಾಡಿದವನಿಗೆ 'ವ್ರತಸ್ನಾತಕ' ಎನ್ನುತ್ತಾರೆ. ಯಾರು ಬ್ರಹ್ಮಚರ್ಯ ಸಮಾಪ್ತಿಮಾಡಿ, ವೇದ ಅಧ್ಯಯನವನ್ನು ಸಂಪೂರ್ಣಗೊಳಿಸಿ ಸ್ನಾನ ಮಾಡಿದವನಿಗೆ ವಿದ್ಯಾವ್ರತಸ್ನಾತಕ ಅಥವಾ ಉಭಯ ಸ್ನಾತಕ ಎನ್ನುತ್ತಾರೆ. 'ಸ್ವಾಧ್ಯಾಯೋಽಧ್ಯೇತವ್ಯಃ' ಎಂದಿರುವುದರಿಂದ ಅಧ್ಯಯನ ಪೂರ್ತಿ ಮಾಡಿ ಬ್ರಹ್ಮಚರ್ಯ ವ್ರತ ಸಮಾಪ್ತಿ ಮಾಡಿದವರು ವಿದ್ಯಾರ್ಥಿಗಳಲ್ಲಿ ಉತ್ತಮರೆನಿಸುತ್ತಾರೆ.

---

* ಬ್ರಹ್ಮಚಾರಿಯ ಕರ್ತವ್ಯಗಳೇನು ? ಇತ್ಯಾದಿ ವಿಷಯಗಳನ್ನು ಇದೇ ಲೇಖಕರ 'ಉಪನೀತರಿಗೆ ಉಪಯುಕ್ತ ಉಪದೇಶ' ಪುಸ್ತಕವನ್ನು ನೋಡಿ ತಿಳಿದುಕೊಳ್ಳಬಹುದು.

೧) ಸಮ್ + ಆ + ವೃತು(ವರ್ತನೇ) ಲ್ಯುಟ್ ಉತ್ಪತ್ತಿಯಿಂದ 'ಸಮಾವರ್ತನ' ಶಬ್ದ ನಿಷ್ಪನ್ನವಾಗಿದೆ.

೨) 'ಸ್ನಾನಮಾಡಿರೋ ಜ್ಞಾನತೀರ್ಥದಲಿ' ಎಂಬ ಪುರಂದರದಾಸರ ನುಡಿಯನ್ನು ಇಲ್ಲಿ ಸ್ಮರಿಸಬಹುದು.

೩) 'ಆಚಾರ್ಯಾಯ ಪ್ರಿಯಂ ಧನಮಾಹೃತ್ಯ' ತೈತ್ತರಿಯೋಪನಿಷತ್

೪) ವೇದಂ ವೇದೌ ತಥಾ ವೇದಾನ್ ದೇದಾನ್ವಾ ಚತುರೋದ್ವಿಜಃ ।
ಅಧೀತ್ಯ ಚಾಧಿಗಮ್ಯಾರ್ಥಂ ತತಸ್ನಾಯಾತ್ ದ್ವಿಜೋತ್ತಮಃ ॥ ಕೂರ್ಮಪುರಾಣ

ಇನ್ನು ಉಪನಯನೋಕ್ತ ಕಾಲವೇ ಸಮಾವರ್ತನೆಗೆ ಕಾಲವೆಂದು ತಿಳಿಯಬೇಕು. ಬಹು ಜ್ಯೋತಿಷ್ಯ ಗ್ರಂಥಗಳ ಅಭಿಪ್ರಾಯವು ಇದೇ ಆಗಿದೆ.

ಸಮಾವರ್ತನ ಸಂಸ್ಕಾರವನ್ನು ಆಚರಿಸಲು ಇಚ್ಛಿಸಿ ಸಮೃದ್ಧಿ, ಐಶ್ವರ್ಯ, ಪಾವಿತ್ರ್ಯ, ತೇಜಸ್ಸು ಇವುಗಳ ಸಮೃದ್ಧಿಗಾಗಿ ಎಂಟು ಕಲಶಗಳ ಪವಿತ್ರ ಜಲದಿಂದ ಸ್ನಾನ ಮಾಡಬೇಕು. ಈ ಪವಿತ್ರ ಸ್ನಾನದ ನಂತರ ಬ್ರಹ್ಮಚಾರಿ ವ್ರತದ ಲಾಂಛನಗಳಾದ ಮೇಖಲ, ಅಜಿನ, ದಂಡಗಳನ್ನು ತ್ಯಜಿಸಬೇಕು.

ಮೊಸರು ಅಥವಾ ತಿಲವನ್ನು ಪ್ರಾಶನಮಾಡಿ ಬೆಳೆದಿರುವ ಕೂದಲು, ಉಗುರುಗಳನ್ನು ಕತ್ತರಿಸಿ ಹಲ್ಲನ್ನು ಉಜ್ಜಿ ಸ್ವಚ್ಛಗೊಳಿಸಿಕೊಳ್ಳಬೇಕು.[೫]

ಪುನಃ ಸ್ನಾನಮಾಡಿ ಪರಿಮಳಯುಕ್ತ ಗಂಧ ಲೇಪಿಸಿಕೊಂಡು, ತಿಲಕಧಾರಣಮಾಡಿ (ಗೋಪಿಚಂದನ) ನೂತನ ವಸ್ತ್ರ, ತುಳಸೀ ಮಾಲಾದಿಗಳನ್ನು ಧಾರಣಮಾಡಿ ನೂತನವಾದ ತನ್ನ ರೂಪವನ್ನು ಕನ್ನಡಿಯಲ್ಲಿ ನೋಡಿಕೊಳ್ಳಬೇಕು. (ಛಾತ್ರ ಜೀವನದಲ್ಲಿ ಅನುಭವಿಸಿದ ಕಷ್ಟ ದೂರವಾಗಿ ಭೌತಿಕ ಜೀವನದ ಸುಖಭೋಗಗಳನ್ನು ಅನುಭವಿಸಲು ಅರ್ಹತೆಯನ್ನು ತಂದುಕೊಡುವುದೇ ಈ ಸಮಾವರ್ತನವು).

ಅನಂತರ ಪಾದರಕ್ಷೆ ಧರಿಸಿ ಛತ್ರಹಿಡಿದು ವಾಹನಾರೂಢನಾಗಿ ಪಂಡಿತರ ಸಭೆಗೆ ಆಗಮಿಸಬೇಕು. ಆಗ ಆ ಸ್ನಾತಕನಿಗೆ ಮಧುಪರ್ಕದ ಭವ್ಯಸ್ವಾಗತ ದೊರೆಯುತ್ತದೆ. ಆ ಸಭೆಯಲ್ಲಿ ತನ್ನ ವಿದ್ವತ್ತನ್ನು ಪ್ರಮಾಣೀಕರಿಸಿ ಗೃಹಸ್ಥಾಶ್ರಮಕ್ಕೆ ಅವರ ಅನುಮತಿ ಪಡೆಯಬೇಕು.

ನಂತರ ಸಮಾವರ್ತನ, ಹೋಮವನ್ನು ಮಾಡಿ ಅಗ್ನಿಯ ಸಮೀಪಕ್ಕೆ ಬಂದು ಸಮಿತ್ತನ್ನು ಕೈಯಲ್ಲಿ ತೆಗೆದುಕೊಂಡು ಈ ರೀತಿ ಪ್ರತಿಜ್ಞೆಗೈದು ಹೋಮ ಮಾಡಬೇಕು.

ಒಳ್ಳೆ ಪದಾರ್ಥಗಳನ್ನು ಸ್ಮರಿಸುವದು, ಕೆಟ್ಟ ಪದಾರ್ಥಗಳನ್ನು ಸ್ಮರಿಸದಿರುವುದು, ಎರಡೂ ನನ್ನ ವ್ರತಗಳಾಗಿರಲಿ.[೬] ಒಳ್ಳೆಯ ಶಾಸ್ತ್ರಾದಿಗಳನ್ನು ಸ್ಮರಿಸುವದು (ನಿಂದಿಸದಿರುವದು) ದುಷ್ಟಶಾಸ್ತ್ರಾದಿಗಳನ್ನು (ನಿಂದಿಸುವದು) ಸ್ಮರಿಸದಿರುವುದು ಎರಡೂ ನನ್ನ ವ್ರತಗಳಾಗಿರಲಿ.[೭] ಸದ್ವಿದ್ಯೆಯನ್ನು ಸ್ಮರಿಸುವದು, ದುಷ್ಟವಿದ್ಯೆ ಸ್ಮರಿಸದಿರುವುದು ಎರಡೂ ನನ್ನ ವ್ರತಗಳಾಗಿರಲಿ.[೮] ಮಾಡಬೇಕಾದ ಕೆಲಸ ಕಾರ್ಯಗಳಲ್ಲಿ ಶ್ರದ್ಧೆ ತೋರಿಸುವದು, ಮಾಡಬಾರದ ಕೆಲಸ ಕಾರ್ಯಗಳಲ್ಲಿ ಶ್ರದ್ಧೆಯನ್ನು ತೋರಿಸದಿರುವುದು, ಎರಡೂ ನನ್ನ ವ್ರತಗಳಾಗಿರಲಿ.[೯] ಆತ್ಮಜ್ಞಾನದ ವಿಷಯದಲ್ಲಿ ಹೆಚ್ಚಾದ ತಿಳಿವಳಿಕೆಯನ್ನು

---

೫) ದಧಿತಿಲಾನ್ವಾ ಪ್ರಾಶ್ಯ ಜಟಾಲೋಮನಖಾನಿ ಸಂಹೃತ್ಯ ಔದುಂಬರೇಣ ದಂತಾನ್ ಧಾವೇತ್ (ಪಾರಸ್ಕರ ಗೃಹ್ಯಸೂತ್ರ)

೬) ಸ್ಮೃತಂ ಚ ಮೇಽ ಸ್ಮೃತಂ ಚ ಮೇ ತನ್ಮ ಉಭಯ ವ್ರತಂ ।

೭) ನಿಂದಾಚ ಮೇಽ ನಿಂದಾ ಚ ಮೇ ತನ್ಮ ಉಭಯ ವ್ರತಂ ।

೮) ವಿದ್ಯಾ ಚ ಮೇಽ ವಿದ್ಯಾ ಚ ಮೇ ತನ್ಮ ಉಭಯ ವ್ರತಂ ।

೯) ಶ್ರದ್ಧಾ ಚ ಮೇಽ ಶ್ರದ್ಧಾ ಚ ಮೇ ತನ್ಮ ಉಭಯ ವ್ರತಂ ।

ತೋರಿಸುವದು ಆತ್ಮಜ್ಞಾನವಲ್ಲದ ವಿಷಯದಲ್ಲಿ ಅನಾದರ ತೋರಿಸುವದು ಎರಡೂ ನನ್ನ ವ್ರತಗಳಾಗಿರಲಿ.[೧೦] ಇಷ್ಟವಾದ ಯಜ್ಞ ಯಾಗಾದಿಗಳಲ್ಲಿ ವಿಶ್ವಾಸ ತೋರಿಸುವದು, ತದ್ವಿರುದ್ಧ ಕಾರ್ಯಗಳಲ್ಲಿ ಅನಾದರಣೆ ತೋರಿಸುವದು ಎರಡೂ ನನ್ನ ವ್ರತಗಳಾಗಿರಲಿ.[೧೧] ಸತ್ಪಾತ್ರರಲ್ಲಿ ದಾನ ಮಾಡುವದು, ಕರ್ಮಭ್ರಷ್ಟನಿಗೆ (ಅಪಾತ್ರನಿಗೆ) ದಾನ ಕೊಡದಿರುವುದು ಎರಡೂ ನನ್ನ ವ್ರತಗಳಾಗಿರಲಿ[೧೨] ಗುರುವಿನಿಂದ ಅಧ್ಯಯನ ಮಾಡುವದು ಗುರುವಿಲ್ಲದೇ ಅಧ್ಯಯನ ಮಾಡದಿಗುವುದು ಎರಡೂ ನನ್ನ ವ್ರತಗಳಾಗಿರಲಿ.[೧೩] ಶಾಸ್ತ್ರೋಕ್ತವಾದುದನ್ನು ಅನುಷ್ಠಾನ ಮಾಡುವದು, ವಿಹಿತವಲ್ಲದ್ದನ್ನು ಅನುಷ್ಠಾನ ಮಾಡದಿರುವದು ಎರಡೂ ನನ್ನ ವ್ರತಗಳಾಗಿರಲಿ.[೧೪] ನಿಜವನ್ನು ಹೇಳುವದು, ನಿಜವಲ್ಲದಿರುವದನ್ನು ಹೇಳದಿರುವುದು ಎರಡೂ ನನ್ನ ವ್ರತಗಳಾಗಲಿ.[೧೫] ಸರಿಯಾದ ಶಾಸ್ತ್ರವನ್ನು ಕೇಳುವದು, ಶಾಸ್ತ್ರೋಕ್ತವಲ್ಲದಿರುವುದನ್ನು ಕೇಳದಿರುವುದು, ಈ ಎರಡೂ ನನ್ನ ವ್ರತಗಳಾಗಿರಲಿ.[೧೬] ವೇದೋಕ್ತ ಅನುಷ್ಠಾನಗಳಲ್ಲಿ ನಿಯಮದಿಂದಿರುವುದು, ವೇದೋಕ್ತವಲ್ಲದ ಅನುಷ್ಠಾನಗಳಲ್ಲಿ ನಿಯಮವಿಲ್ಲದಿರುವಿಕೆ, ಎರಡೂ ನನ್ನ ವ್ರತಗಳಾಗಿರಲಿ.[೧೭]

ಅಗ್ನಿಯಲ್ಲಿ ಸಮಿತ್ತನ್ನು ಹೋಮ ಮಾಡಿದ ನಂತರ ಸ್ನಾತಕನು ರಾತ್ರಿಹೊತ್ತಿನಲ್ಲಿ ಬೆತ್ತಲೆಯಾಗಿ ಸ್ನಾನಮಾಡುವದಿಲ್ಲ. (ನಿಮಿತ್ತ ಇಲ್ಲದೇ), ಬೆತ್ತಲೆಯಾದ ಸ್ತ್ರೀಯನ್ನು ನೋಡುವದಿಲ್ಲ. ಮಳೆಯಲ್ಲಿ ಓಡುವದಿಲ್ಲ. ಮರವನ್ನು ಹತ್ತುವದಿಲ್ಲ. ಬಾವಿಯಲ್ಲಿ ಇಳಿಯುವದಿಲ್ಲ. ಸಂಶಯ ಪ್ರವೃತ್ತಿ ಉಳ್ಳವನಾಗುವದಿಲ್ಲ ಎಂದು ಸಂಕಲ್ಪ ಮಾಡಬೇಕು.[೧೮] ನಂತರ ಮೂರು ದಿನ ಅಶೌಚವನ್ನು ಆಚರಿಸಬೇಕು.

ಈಗ ಸ್ನಾತಕನು ವಿವಾಹ ಸಂಸ್ಕಾರಕ್ಕೆ ಅಣಿಯಾಗುತ್ತಾನೆ. ವಿವಾಹ ಸಂಸ್ಕಾರವನ್ನು ಹೊಂದಿ ಗೃಹಸ್ಥಾಶ್ರಮ ಧರ್ಮಗಳನ್ನು ಪರಿಪಾಲಿಸಬೇಕು.

– ⊙ –

---

೧೦) ಪ್ರಜ್ಞಾ ಚ ಮೇಽ ಪ್ರಜ್ಞಾ ಚ ಮೇ ತನ್ಮ ಉಭಯ ವ್ರತಂ ।

೧೧) ಇಷ್ಟಂ ಚ ಮೇಽ ನಿಷ್ಟಂ ಚ ಮೇ ತನ್ಮ ಉಭಯ ವ್ರತಂ ।

೧೨) ದತ್ತಂ ಚ ಮೇಽ ದತ್ತಂ ಚ ಮೇ ತನ್ಮ ಉಭಯ ವ್ರತಂ ।

೧೩) ಅಧೀತಂ ಚ ಮೇಽ ನಧೀತಂ ಚ ಮೇ ತನ್ಮ ಉಭಯ ವ್ರತಂ ।

೧೪) ಕೃತಂ ಚ ಮೇಽ ಕೃತಂ ಚ ಮೇ ತನ್ಮ ಉಭಯ ವ್ರತಂ ।

೧೫) ಸತ್ಯಂ ಚ ಮೇಽ ಸತ್ಯಂ ಚ ಮೇ ತನ್ಮ ಉಭಯ ವ್ರತಂ ।

೧೬) ಶ್ರುತಂ ಚ ಮೇಽ ಶ್ರುತಂ ಚ ಮೇ ತನ್ಮ ಉಭಯ ವ್ರತಂ ।

೧೭) ವ್ರತಂ ಚ ಮೇಽ ವ್ರತಂ ಚ ಮೇ ತನ್ಮ ಉಭಯ ವ್ರತಂ ।

೧೮) ತತಃ ಸ್ನಾತಕೋ ನೈಮಿತ್ತಿಕಾದಿ ವಿನಾ, ನಕ್ತಂ ನಗ್ನಶ್ಚ ನ ಸ್ನಾಸ್ಯಾಮಿ ।
ನಗ್ನಾಂ ಸ್ತ್ರೀಯಂ ನೇಕ್ಷೆ । ವರ್ಷತಿ ನ ಧಾವಾಮಿ । ವೃಕ್ಷಂ ನಾರೋಹಾಮಿ ।
ಕೂಪಂ ನಾವರೋಹಾಮಿ । ಸಂಶಯಂ ನಾಭ್ಯಾಪತ್ಸ್ಯೇ ॥ ಇತ್ಯೇವ ಸಂಕಲ್ಪಯೇತ್॥

# ಬ್ರಾಹ್ಮ ವಿವಾಹ ವಿಧಿ ಪರಿಚಯ

ವಿವಾಹ ಸಂಸ್ಕಾರವು ವಧೂವರರನ್ನು ಪವಿತ್ರವಾದ ಬಂಧನದಲ್ಲಿರಿಸಿ, ಉತ್ತಮ ಪ್ರಜಾಸಂಪತ್ತಿಗೆ ಕಾರಣವಾಗಿ ವಂಶವೃಕ್ಷವನ್ನು ಬೆಳೆಸುವ ಮಹಾನ್ ಸಂಪ್ರದಾಯವಾಗಿದೆ. ಇದರ ಕಿರು ಪರಿಚಯ ಇಲ್ಲಿದೆ.

ವಿವಾಹ ಸಂಸ್ಕಾರದ ಪ್ರಮುಖ ಅಂಗಗಳು ಹೀಗಿವೆ :- ೧) ಸೀಮಾಂತಪೂಜೆ, ೨) ವಾಙ್‌ನಿಶ್ಚಯ, ೩) ಋಕ್ಶೋತ, ೪) ಪುಣ್ಯಾಹವಾಚನ, ೫) ಮಾತೃಕಾಪೂಜನ, ೬) ನಾಂದೀಶ್ರಾದ್ಧ, ೭) ಮಂಟಪದೇವತಾಸ್ಥಾಪನೆ, ೮) ಮಧುಪರ್ಕ, ೯) ಗೌರೀ ಹರ ಪೂಜೆ, ೧೦) ವಧೂವರ ನಿರೀಕ್ಷಣ, ೧೧) ಕನ್ಯಾದಾನ, ೧೨) ಕಂಕಣಬಂಧನ, ೧೩) ಅಕ್ಷತಾರೋಪಣ, ೧೪) ಮಾಂಗಲ್ಯಬಂಧನ, ೧೫) ವಿವಾಹ ಹೋಮ, ೧೬) ಪಾಣಿಗ್ರಹಣ, ೧೭)ಲಾಜಾಹೋಮ, ೧೮) ಅಶ್ಮಾರೋಹಣ, ೧೯) ಸಪ್ತಪದಿ, ೨೦) ಅರುಂಧತೀ ದರ್ಶನ, ೨೧) ಗೃಹಪ್ರವೇಶಿನಿಯ ಹೋಮ, ೨೨) ಹೃದಯಸ್ಪರ್ಶ, ೨೩) ತ್ರಿರಾತ್ರವ್ರತ, ೨೪) ನಿಷೇಕ ಪ್ರಸ್ತ, ೨೫) ಅಷ್ಟಪುತ್ರೀ ವಿಸರ್ಜನ, ೨೬) ವರಬಂಧು ಪೂಜನ, ೨೭) ನಾಗೋಲಿ ಅಥವಾ ವಸಂತಪೂಜೆ, ೨೮) ಐರಿಣೀ ಪೂಜನ, ಕೂಸು ಒಪ್ಪಿಸುವದು, ೨೯) ದಿಗ್ಗಜ ಪೂಜೆ, ೩೦) ಗೃಹಪ್ರವೇಶ, ೩೧) ದೇವತೋತ್ಥಾಪನ, ಮಂಡಪೋದ್ವಾಸನ, ೩೨) ಪುರೋಹಿತರಿಗೆ ದಕ್ಷಿಣೆ.

೧) **ಸೀಮಾಂತಪೂಜೆ (ವರಪೂಜೆ) :** ವರನಲ್ಲಿ ನಾರಾಯಣನ ಸನ್ನಿಧಾನವಿದೆಯೆಂದು ಅನುಸಂಧಾನಮಾಡಿ ಊರಹೊರಗೆ (ದೇವಾಲಯದಲ್ಲಿ) ಅವನಿಗೆ ಪೂಜೆ ಸಲ್ಲಿಸುವ ಕಾರ್ಯಕ್ಕೆ ಸೀಮಾಂತಪೂಜೆ ಎನ್ನುತ್ತಾರೆ.

ಕನ್ಯಾಪಿತನು ವಿವಾಹದ ಹಿಂದಿನ ದಿವಸ ಬೀಗರು ಬರುವ ಸಮಯಕ್ಕೆ ಸರಿಯಾಗಿ ಮಂಗಳದ್ರವ್ಯಗಳನ್ನು, ಕಲಶ, ಕನ್ನಡಿಯನ್ನು, ಹೂವಿನ ಹಾರವನ್ನು ಅರಿಶಿನದ ಟೆಂಗಿನಕಾಯಿಯನ್ನು ಸಹ ತೆಗೆದುಕೊಂಡು ಮಂಗಳವಾದ್ಯಗಳೊಡನೆ ಬೀಗರನ್ನು ಎದುರುಗೊಂಡು ಕುಶಲಪ್ರಶ್ನೆ ಮಾಡಿ, ವರನಿಗೆ ಹೂವಿನ ಹಾರ ಹಾಕಿ, ತಾಂಬೂಲ ಸಹಿತ ಫಲ (ಟೆಂಗು)ವನ್ನು ವರನ ಕೈಗೆ ಕೊಟ್ಟು, ಮಂಗಳ ವಾದ್ಯಗಳ ಸಹಿತವಾಗಿ ಬೀಗರ ಬಿಡಾರಕ್ಕೆ (ದೇವಾಲಯಕ್ಕೆ) ಕರೆತಂದು ಎರಡು ಮಣೆಗಳನ್ನು ಹಾಕಿ ಕಳಸಗಿತ್ತಿ ಮತ್ತು ವರನನ್ನು ಪೂರ್ವಾಭಿಮುಖವಾಗಿ ಕೂಡ್ರಿಸಿ ಆಚಮನ ಸಂಕಲ್ಪಾದಿಗಳನ್ನು ಮಾಡಿ ಗಣಪತಿ, ವರುಣ ಪೂಜೆ ಮಾಡಿ ವರನ ಕಾಲುತೊಳೆದು, ಕುಂಕುಮವಿಟ್ಟು, ತಾಂಬೂಲಕೊಟ್ಟು ಆರತಿ ಮಾಡಬೇಕು.

೨) **ವಾಙ್‌ನಿಶ್ಚಯ :** ವಧುವರ ಪಕ್ಷದವರಿಬ್ಬರೂ ಗಣಪತಿ, ವರುಣ ಪೂಜೆಗಳನ್ನು ಮಾಡಿ ಕಾರ್ಯದಲ್ಲಿ ನಿರ್ವಿಘ್ನತೆಯನ್ನು ಮತ್ತು ಮಂಗಲಮಯ ವಾತಾವರಣವನ್ನು ದೇವರಲ್ಲಿ ಪ್ರಾರ್ಥಿಸಬೇಕು. ಆಗ ಕನ್ಯಾದಾತೃವು ನಾಲ್ಕು ಜನರ ಮಧ್ಯದಲ್ಲಿ ತನ್ನ ಕುಲಗೋತ್ರಗಳನ್ನು ಹೇಳಿ, ವರನ ಕುಲಗೋತ್ರಗಳನ್ನು ಉಚ್ಚರಿಸಿ ಇಂತಹ ವಿಶಿಷ್ಟವರನಿಗೆ ತನ್ನ ಮಗಳನ್ನು ಕೊಡುವೆನೆಂದು ಸಂಕಲ್ಪಮಾಡುತ್ತಾನೆ. ವರನ ತಂದೆಯು ತನ್ನ ಮಗನಿಗೆ ಈ ಕನ್ಯೆಯನ್ನು ಸ್ವೀಕರಿಸುವುದಾಗಿ ಪ್ರತಿವಚನ (ಸ್ವೀಕಾರೋಕ್ತಿಯನ್ನು) ಕೊಡುತ್ತಾನೆ.[೧] ನಂತರ ಬೀಗರು ಇಬ್ಬರೂ ಅನ್ಯೋನ್ಯವಾಗಿ ಫಲತಾಂಬೂಲಾದಿಗಳನ್ನು ವಿನಿಮಯ ಮಾಡಿಕೊಂಡು ವಸ್ತ್ರಾಲಂಕಾರಗಳನ್ನು ಕೊಟ್ಟು ಕೊಬ್ಬರಿ ಸಕ್ಕರೆಯನ್ನು ಹಂಚಬೇಕು. ಇಂದಿನಿಂದ ನಾವು ಒಂದೇ ಮನೆಯವರು. ನಮ್ಮ ವಿಚಾರಗಳೆಲ್ಲ ಒಂದೇ. ಆದ್ದರಿಂದ ನಾವು ಪ್ರೀತಿಯಿಂದ ಇರೋಣ. ನಮ್ಮ ಈ ಸಮನ್ವಯವು ಬಲಪೂರ್ಣವಾಗಲಿ ಎಂದು ಪ್ರತಿಜ್ಞೆ ಮಾಡುತ್ತಾರೆ.[೨] ಸುವಾಸಿನೀ ಸ್ತ್ರೀಯರಿಗೆ ಅರಿಶಿಣ, ಕುಂಕುಮ, ತಾಂಬೂಲ ಇತ್ಯಾದಿಗಳನ್ನು ಕೊಡಬೇಕು. ವೃದ್ಧರೆಲ್ಲರೂ ಆಶೀರ್ವಾದ ಮಾಡಬೇಕು. (ಈ ನಿಶ್ಚಯ ಕಾರ್ಯವನ್ನು ಲಗ್ನದ ಮೊದಲು ಮಾಡುವ ಪದ್ಧತಿ ಉಂಟು. ಆದರೆ ಆ ಪ್ರಸಂಗದಲ್ಲಿ ವಧುವನ್ನು ಮಾತ್ರ ಕೂಡಿಸಿ ನಿಶ್ಚಯ ಕಾರ್ಯಮಾಡಬೇಕು. ಇತ್ತೀಚೆಗೆ ವಧುವರರಿಬ್ಬರನ್ನು ಒಂದೇ ವೇದಿಕೆಯಲ್ಲಿ ಕೂಡಿಸಿ ಉಂಗುರ ಹಾಕಿಸುವುದು, ಒಬ್ಬರು ಇನ್ನೊಬ್ಬರಿಗೆ ಮಾಲೆ ಹಾಕುವದು ಮಾಡುತ್ತಾರೆ. ಅವರಿಬ್ಬರ ಸ್ಪರ್ಶ ಈ ಪ್ರಸಂಗದಲ್ಲಿ ಅಶಾಸ್ತ್ರೀಯವಾಗಿದೆ.)

೩) **ಋಕ್ಕೋತ (ಜಾನವಾಸ) :** ಈ ನಿಶ್ಚಯದ ನಂತರ ಬೀಗರನ್ನು ಆಹ್ವಾನಮಾಡಿ ಅವರಿಗೆ ಪ್ರೀತಿಯಿಂದ ಭೋಜನ ಮಾಡಿಸಬೇಕು.

೪) **ಪುಣ್ಯಾಹವಾಚನ :** ವಿವಾಹದ ದಿನ ಪ್ರಾತಃಕಾಲದಲ್ಲಿ ಮಂಗಳಸ್ನಾನ ಮಾಡಿ ಕನ್ಯಾದಾತೃವು ಗಣಪತಿಪೂಜೆ, ವರುಣ ಪೂಜೆಗಳನ್ನು ಮಾಡಿ ಬ್ರಾಹ್ಮಣರಿಂದ, ವೇದ ಮಂತ್ರಗಳಿಂದ, ಇಂದಿನ ಕಾರ್ಯವು ಸಮೃದ್ಧಿ ತರಲಿ, ಶುಭ ತರಲಿ, ಸಂಪತ್ತು ತರಲಿ, ಒಳ್ಳೆಯದಾಗಲಿ ಎಂಬುದಾಗಿ ಆಶೀರ್ವಾದ ತೆಗೆದುಕೊಳ್ಳಬೇಕು. ಎಲ್ಲ ದೇವತೆಗಳ ಸ್ಮರಣೆ ಮಾಡುತ್ತ ಏಕಚಿತ್ತರಾಗಿ ಈ ಕಾರ್ಯ ನೆರವೇರಿಸಬೇಕು.

---

೧) ವಾಚಾ ದತ್ತಾ ಮಯಾಕನ್ಯಾ ಪುತ್ರಾರ್ಥಂ ಸ್ವೀಕೃತಾ ತ್ವಯಾ ।
ಕನ್ಯಾವಲೋಕನ ವಿಧೌ ನಿಶ್ಚಿತಸ್ತ್ವಂ ಸುಖೀಭವ ॥ (ಕನ್ಯೆಯ ತಂದೆ ಹೇಳುವನು)
ವಾಚಾ ದತ್ತಾ ತ್ವಯಾ ಕನ್ಯಾ ಪುತ್ರಾರ್ಥಂ ಸ್ವೀಕೃತಾ ಮಯಾ ।
ವರಾವಲೋಕನ ವಿಧೌ ನಿಶ್ಚಿತಸ್ತ್ವಂ ಸುಖೀಭವ ॥ (ವರನ ತಂದೆ ಹೇಳುವನು)

೨) ಸಮಾನೀವ ಆಕೂತಿಃ ಸಮಾನಾ ಹೃದಯಾನಿ ವಃ ।
ಸಮಾನಮಸ್ತು ವೋ ಮನೋ ಯಥಾವಃ ಸುಸಹಾಸತಿ ॥ (ಋಗ್ವೇದ)

೫) **ಮಾತೃಕಾ ಪೂಜನ :** ಅಕ್ಕಿಯ ರಾಶಿಯ ಮೇಲೆ ಇಟ್ಟ ಅಡಿಕೆಬೆಟ್ಟಗಳಲ್ಲಿ ಗೌರಿ ಮೊದಲಾದ ಹದಿನಾರು, ಬ್ರಾಹ್ಮೀ ಮೊದಲಾದ ಏಳು ಮತ್ತು ಗಣಪತಿ ಮೊದಲಾದ ನಾಲ್ಕು ದೇವತೆಗಳನ್ನು ಆವಾಹಿಸಿ ಪೂಜಿಸಬೇಕು.[೩]

೬) **ನಾಂದೀಶ್ರಾದ್ಧ :** ಯಾವುದೇ ಶುಭಕಾರ್ಯ ಮಾಡುವ ಸಮಯದಲ್ಲಿ ಮೇಲೆ ತಿಳಿಸಿದಂತೆ ಮಾತೃಕಾದೇವತೆಗಳನ್ನು ಪೂಜಿಸುವುದರ ಜೊತೆಗೆ ವಿಶ್ವೇದೇವತೆಗಳನ್ನು, ಮಾತಾ, ಪಿತೃಗಳ ಮತ್ತು ಮಾತಾಮಹ, ಮಾತಾಮಹಿ ಇತ್ಯಾದಿ ದ್ವಾದಶ ಪಿತೃಗಳನ್ನು (ಸ್ವರ್ಗಸ್ಥರಾಗದಿದ್ದವರನ್ನು ಬಿಟ್ಟು) ಕುರಿತು ಅರ್ಘ್ಯ, ಆಸನ, ಗಂಧಾದಿ ಉಪಚಾರಗಳನ್ನು ಸಲ್ಲಿಸಬೇಕು. ಮಂಗಲಕಾರ್ಯಗಳಲ್ಲಿ ಪಿತೃಗಳನ್ನು ಕುರಿತು ಮಾಡುವ ಈ ಕಾರ್ಯಕ್ಕೆ ನಾಂದೀಶ್ರಾದ್ಧ ಅಥವಾ ನಾಂದೀ ಸಮಾರಾಧನವೆಂದು ಕರೆಯುತ್ತಾರೆ. ಇದಕ್ಕೆ ವೃದ್ಧಿಶ್ರಾದ್ಧವೆಂದೂ ಕರೆಯುತ್ತಾರೆ. ಈ ನಾಂದೀ ಶ್ರಾದ್ಧದಲ್ಲಿ ಸತ್ಯವಸುಗಳು ವಿಶ್ವೇದೇವತೆಗಳಾಗಿದ್ದಾರೆ. ಈ ನಾಂದೀಶ್ರಾದ್ಧವಾದ ಮೇಲೆ ವೃದ್ಧಿ, ಸೂತಕಗಳು ಬಂದರೆ ಆ ಕಾರ್ಯ ಮುಗಿಯುವವರೆಗೆ ದೋಷವಿಲ್ಲ.[೪]

೭) **ಮಂಟಪ ದೇವತಾ ಸ್ಥಾಪನೆ :** (ವಿವಾಹದ ಹಿಂದಿನ ದಿನವೂ ಮಾಡುವ ಪದ್ಧತಿ ಉಂಟು) ನಂದಿನಿ, ನಲಿನೀ, ಮೈತ್ರಾ, ಉಮಾ, ಪಶುವರ್ಧಿನೀ, ಶಸ್ತ್ರಗರ್ಭಾ, ಭಗವತೀ ಮೊದಲಾದ ಮಂಗಲಕರ ದೇವತೆಗಳನ್ನು ಆವಾಹಿಸಿ ಪೂಜೆಮಾಡಿ, ಅವಿಘ್ನ ಸಂಜ್ಞಕ ಗಣಪತಿ ಕುಲದೇವತೆಗಳನ್ನು ಪೂಜಿಸಿ ಅವರಿಗೆ ಷೋಡಶೋಪಚಾರ ಪೂಜೆ ಸಲ್ಲಿಸಬೇಕು. ಮಂಗಲವಾದ್ಯ ಘೋಷಗಳೊಂದಿಗೆ ಮನೆಯ ಈಶಾನ್ಯ ದಿಕ್ಕಿನಲ್ಲಿ ಅಕ್ಕಿಯ ಮೂರು ರಾಶಿಗಳನ್ನು ಮಾಡಿ ಅವುಗಳ ಮೇಲೆ ಸ್ಥಾಪಿಸಬೇಕು.

೮) **ಮಧುಪರ್ಕ :** ಮೊಸರು ಮತ್ತು ಜೇನನ್ನು ಕೂಡಿಸಿದರೆ ಮಧುಪರ್ಕವಾಗುತ್ತದೆ. ಮನೆಗೆ ಬಂದ ದೇವತೆಗಳಿಗೆ ಮಧುಪರ್ಕದಿಂದ ಪೂಜೆಮಾಡಬೇಕು. ಇಲ್ಲಿ ವರನು 'ನಾರಾಯಣ' ರೂಪಿಯಾದುದರಿಂದ ಕನ್ಯಾಪಿತನು ಅಳಿಯನಿಗೆ ಮಧುಪರ್ಕವನ್ನು ಅರ್ಪಿಸಬೇಕು. ವರನು ವಸು, ರುದ್ರ, ಆದಿತ್ಯ ಮತ್ತು ಭೂತಗಳಿಗೆ ಅದನ್ನು ನಿವೇದಿಸಿ ಈ ಮಧುವು ನನಗೆ ತೇಜಸ್ಸು, ಸ್ಥೈರ್ಯ, ಸತ್ಯ, ಕೀರ್ತಿ, ಸಂಪತ್ತು ಮತ್ತು ಕಾಂತಿಯನ್ನು ಕೊಡಲಿ ಎಂಬುದಾಗಿ ಪ್ರಾರ್ಥಿಸಿ ಪ್ರಾಶನ ಮಾಡುತ್ತಾನೆ. ಆನಂತರ ಕನ್ಯಾಪಿತನು ಗೌರ್ಗೌರ್ಗೌ ಎಂದು ಮೂರುಬಾರಿ ಹೇಳಿ ಒಪ್ಪಿಸಿದ ಹಸು ಅಥವಾ ಅದಕ್ಕೆ ಬದಲಾಗಿ ಕೊಟ್ಟ ದ್ರವ್ಯವನ್ನು ತ್ಯಾಗಮಾಡುತ್ತಾನೆ. ನಂತರ ಕನ್ಯಾಪಿತನು ಗಂಧ, ಮಾಲ್ಯ, ಎರಡು ವಸ್ತ್ರ, ಎರಡು

---

೩) ಗೌರ್ಯಾದಿ ಷೋಡಶಮಾತೃಃ ಬ್ರಾಹ್ಮ್ಯಾದಿ ಸಪ್ತಮಾತೃಃ
ಗಣಪತಿಂ ದುರ್ಗಾಂ ಕ್ಷೇತ್ರಪಾಲಂ ವಾಸ್ತೋಷ್ಪತಿಂ ಚ ಆವಾಹಯಾಮಿ ॥ ಹೇಳಿ ಪೂಜಿಸಬೇಕು.

೪) ವಿವಾಹ ಕಾರ್ಯದಲ್ಲಿ ೧೦ ದಿನ ಮೊದಲು ಈ ನಾಂದೀಶ್ರಾದ್ಧವನ್ನು ಮಾಡಬಹುದು. (ಆಯಾ ದೇಶಾಚಾರದಂತೆ ಮಾಡಬೇಕು) ಇದನ್ನು ಮಾಡುವಾಗ ದರ್ಭೆಯ ಪವಿತ್ರ ಧರಿಸುವ ಬದಲು ದೂರ್ವೆಯ ಪವಿತ್ರ ಧರಿಸುವದೂ ಉಂಟು.)

ಯಜ್ಞೋಪವೀತ, ಆಭರಣಗಳನ್ನಿತ್ತು ವರನನ್ನು ಸತ್ಕರಿಸುತ್ತಾನೆ. ಹಾಗೆಯೇ ವರನ ಜೊತೆಗೆ ಬಂದ ಬಾಂಧವರನ್ನೂ ಸತ್ಕರಿಸುತ್ತಾನೆ.

೯) **ಗೌರೀ ಹರ ಪೂಜೆ :** ಕನ್ಯೆಯು ಸ್ನಾನಮಾಡಿ ಹಳದೀಬಣ್ಣದ ಶುಚಿಯಾದ ಬಟ್ಟೆಗಳನ್ನು ಧರಿಸಿ ಮನೆಯ ಒಳಗಡೆ ದೇವರ ಕೋಣೆಯಲ್ಲಿ ಪೂರ್ವಾಭಿಮುಖವಾಗಿ ಕುಳಿತು ಗೌರಿಯನ್ನು, ರುದ್ರದೇವರನ್ನು, ಇಂದ್ರಾಣಿಯನ್ನು ಪೂಜಿಸಿ ಸುಖಮಯ ವೈವಾಹಿಕ ಜೀವನಕ್ಕಾಗಿ, ಭಾಗ್ಯಕ್ಕಾಗಿ, ಆರೋಗ್ಯಕ್ಕಾಗಿ ಮತ್ತು ಸತ್ಪುತ್ರಪ್ರಾಪ್ತಿಗಾಗಿ ಪ್ರಾರ್ಥಿಸಬೇಕು.[೫]

೧೦) ವಧೂವರ ನಿರೀಕ್ಷಣ : ಚೆನ್ನಾಗಿ ಅಲಂಕರಿಸಿದ ವಿವಾಹ ಮಂಟಪದಲ್ಲಿ ಪೂರ್ವ ಮತ್ತು ಪಶ್ಚಿಮ ಭಾಗಗಳಲ್ಲಿ ಒಂದು ಮೊಳದಷ್ಟು ಅಂತರಬಿಟ್ಟು ಒಂದೊಂದು ಸೇರು ಅಕ್ಕಿ ಸುರಿದು ಎರಡು ರಾಶಿ ಮಾಡಬೇಕು. ಎರಡೂ ಬದಿಗಳಲ್ಲಿ ಕುಂಕುಮದಿಂದ ಸ್ವಸ್ತಿಕ ಚಿಹ್ನೆಯನ್ನು ಬರೆದ ಅಂತಃಪಟವನ್ನು ದಕ್ಷಿಣೋತ್ತರವಾಗಿ ಆ ಅಕ್ಕಿಗಳ ರಾಶಿಯ ಮಧ್ಯಭಾಗದಲ್ಲಿ ಸರಿಯಾಗುವಂತೆ ಎತ್ತಿ ಹಿಡಿಯಬೇಕು. ಪೂರ್ವದ ಕಡೆಯ ರಾಶಿಯ ಮೇಲೆ ಪಶ್ಚಿಮಕ್ಕೆ ಮುಖಮಾಡಿ ವರನನ್ನೂ, ಪಶ್ಚಿಮದ ರಾಶಿಯ ಮೇಲೆ ಪೂರ್ವಕ್ಕೆ ಮುಖಮಾಡಿ ವಧುವನ್ನೂ ಅವರ ಕೈಯಲ್ಲಿ ಅಕ್ಕಿ, ಬೆಲ್ಲ ಮತ್ತು ಜೀರಿಗೆಯನ್ನು ಮಿಶ್ರಣಮಾಡಿಕೊಟ್ಟು ನಿಲ್ಲಿಸಬೇಕು. ಬ್ರಾಹ್ಮಣರು 'ಸತ್ಯೇನೋತ್ತಭಿತಾ' ಎಂಬ ಸೂಕ್ತವನ್ನು ಹೇಳಬೇಕು. ವಧೂವರರು ತಮ್ಮ ಇಷ್ಟದೇವತೆಯನ್ನು, ಧ್ಯಾನಿಸುತ್ತ ಏಕಾಗ್ರಚಿತ್ತರಾಗಿ ನಿಂತಿರಬೇಕು. ಅಂತಃಪಟದಲ್ಲಿ ಇರುವ ಸ್ವಸ್ತಿಕ ಚಿಹ್ನೆಯನ್ನು ನೆಟ್ಟದೃಷ್ಟಿಯಿಂದ ನೋಡುತ್ತಿರಬೇಕು. ನಂತರ ಜ್ಯೋತಿಷ್ಕರು ಸೂಚಿಸಿದ ಸುಮುಹೂರ್ತಕಾಲವು ಬಂದಾಗ 'ತದೇವ ಲಗ್ನಂ' ಎಂದು ಹೇಳಿ ಸುಮುಹೂರ್ತಮಸ್ತು ಓಂ ಪ್ರತಿಷ್ಠಾ' ಎಂದು ಹೇಳಿದಾಗ ಅಂತಃಪಟವನ್ನು ಉತ್ತರದಿಕ್ಕಿಗೆ ಸರಿಸಬೇಕು. ಆಗ ವಧೂವರರು ತಮ್ಮ ಕೈಯಲ್ಲಿರುವ ಅಕ್ಕಿ, ಬೆಲ್ಲ, ಜೀರಿಗೆ ಮಿಶ್ರಣವನ್ನು ಪರಸ್ಪರವಾಗಿ ತಲೆಯ ಮೇಲೆ ಹಾಕಬೇಕು. ಇಬ್ಬರೂ ಪರಸ್ಪರ ಮುಖವನ್ನು ನೋಡಬೇಕು.[೬]

ಆ ಮೇಲೆ ವರನು 'ಓಂ ಅಭ್ರಾತೃಘ್ನೀಂ' ಎಂದು ಜಪಿಸುತ್ತ ಕನ್ಯೆಯನ್ನು ಪತ್ನೀಭಾವದಿಂದ ನೋಡಬೇಕು.[೭] ನಂತರ 'ಅಘೋರಚಕ್ಷು' ಎಂಬ ಮಂತ್ರವನ್ನು ಹೇಳಿ

---

೫) ಅವಿಚ್ಛಿನ್ನ ಸೌಭಾಗ್ಯ ಶುಭಸಂತತಿ ಧನಧಾನ್ಯಾದಿಸಿದ್ಧಯೇ ಗೌರೀ ಹರೌ ಪೂಜಯಿಷ್ಯೇ । ಹೇಳಿ, ದೇವೇಂದ್ರಾಣಿ ನಮಸ್ತುಭ್ಯಂ ದೇವೇಂದ್ರ ಪ್ರಿಯಭಾಮಿನಿ । ವಿವಾಹಂ ಭಾಗ್ಯಮಾರೋಗ್ಯಂ ಪುತ್ರಲಾಭಂ ಚ ದೇಹಿಮೇ ॥

೬) ಈ ಪ್ರಸಂಗದಲ್ಲಿ ಎಲ್ಲ ಬ್ರಾಹ್ಮಣರೂ ಮಂಗಲಾಷ್ಟಕ ಹೇಳಿ ಅಕ್ಷತಾ ಹಾಕುವ ಪದ್ಧತಿ ಉಂಟು. ಅವರವರ ಸಂಪ್ರದಾಯದಂತೆ ಮಾಡಬೇಕು.

೭) ಎಲೈ ! ವರುಣನೆ ಇವಳು ಅಣ್ಣತಮ್ಮಂದಿರಿಗೆ ಸುಖಕರಳು, ಎಲೈ ಬೃಹಸ್ಪತಿಯೆ ! ಇವಳು ಪತಿಗೆ ಸುಖದಾಯಕಳು, ಇಂದ್ರನೆ ! ಇವಳು ಮಕ್ಕಳಿಗೆ ಸುಖದಾಯಕಳು; ಸೂರ್ಯನೇ ! ಇವಳು ಸಂಪತ್ತಿದಾಯಕಳು ಆಗಲಿ ಎಂದು ವರನು ಪ್ರಾರ್ಥಿಸಬೇಕು.

ದರ್ಭೆಯ ತುದಿಯಿಂದ ಕನ್ನಿಕೆಯ ಹುಬ್ಬುಗಳ ಮಧ್ಯಭಾಗವನ್ನು 'ಓಂ ಭೂರ್ಭುವಸ್ವಃ' ಎಂದು ಹೇಳುತ್ತ ಒರೆಸಿ ದರ್ಭೆಯನ್ನು ಬಿಸುಟು ಕೈತೊಳೆದುಕೊಳ್ಳಬೇಕು. ನಂತರ 'ಋಕ್ಚವಾ ಇದಮಗ್ರೇ' ಇತ್ಯಾದಿ ವಾಕ್ಯಗಳನ್ನು ಹೇಳುತ್ತ ಮೂರು ಅಥವಾ ಐದುಬಾರಿ ವಧು ಮೊದಲ್ಗೊಂಡು ಅಕ್ಷತಾ ಹಾಕಬೇಕು.

೧೧) **ಕನ್ಯಾದಾನ :** ಕನ್ಯಾಪಿತನು, "ಈ ಕನ್ಯಾದಾನದಿಂದ ನನ್ನ ಸಮಸ್ತ ಪಿತೃಗಳಿಗೆ ಉತ್ತಮ ಲೋಕ ಸಿಗಲಿ, ಹಿಂದಿನ೧೨ ತಲೆಗಳು, ಮುಂದಿನ೧೨ ತಲೆಗಳು ಉದ್ಧೃತರಾಗಲಿ" ಎಂದು ಹೇಳಿ ಸಂಕಲ್ಪಮಾಡಿ ಕನ್ಯಾದಾನವನ್ನು ಮಾಡಬೇಕು.[೮] ವರನಿಗೆ ದಕ್ಷಿಣೆ ಕೊಡಬೇಕು (ತನ್ನ ಯೋಗ್ಯತಾನುಸಾರವಾಗಿ).

ಈ ಕಾಲದಲ್ಲಿ ವರನು ಎಲ್ಲೈ ಕನ್ಯೆಯೇ ! ಬ್ರಹ್ಮನು ನಿನ್ನನ್ನು ನನಗೆ ಕೊಟ್ಟಿರುವನು. ಎರಡು ಇಚ್ಛೆಗಳು ಒಂದಾಗುವಂತೆ ನಾವು ಒಂದಾಗಿದ್ದೇವೆ. ನೀನು ನನ್ನ ಹತ್ತಿರ ಬರಲು ಇಚ್ಛೆ ಉಳ್ಳವಳಾಗಿದ್ದೀ. ನಾನು ನಿನ್ನನ್ನು ಸ್ವೀಕರಿಸಲು ಇಚ್ಛುಕನಾಗಿದ್ದೇನೆ. ಪೃಥ್ವಿಯಂತೆ ಇರುವ ನಿನ್ನನ್ನು ನಾನು ಸ್ವೀಕರಿಸುತ್ತೇನೆ ಎಂದು ಹೇಳುತ್ತಾನೆ.

ಕನ್ಯಾಪಿತನು "ಮಗಳೇ ! ನಿನ್ನನ್ನು ಯೋಗ್ಯವರನಿಗೆ ಕೊಟ್ಟಿದ್ದೇನೆ. ನೀನು ನನ್ನ ಆದರ್ಶವನ್ನು ರಕ್ಷಿಸುವವಳಾಗು. ನಿನ್ನ ದಾನದಿಂದ ನಾನು ಸದ್ಗತಿ ಪಡೆಯುತ್ತೇನೆ" ಎಂದು ಹೇಳಿ ವರನಿಗೆ "ನಿನ್ನ ವಂಶವನ್ನು ಬೆಳೆಸುವ ಇವಳನ್ನು ನಿನಗೆ ದಾನಮಾಡಿದ್ದೇನೆ. ನೀನು ಧರ್ಮದ ಕಾರ್ಯಗಳನ್ನು, ಹಣದ ವ್ಯವಹಾರವನ್ನು, ಶಾರೀರಿಕ ಸುಖಗಳನ್ನು ಇವಳಿಂದ ಸಹಿತವಾಗಿ ಮಾಡು ಮತ್ತು ಪಡೆ. ಈ ವಿಷಯಗಳಲ್ಲಿ ಇವಳನ್ನು ತಿರಸ್ಕರಿಸಬೇಡ,[೯] ಎಂದು ಹೇಳಬೇಕು.

ಆಗ ವರನು ನಿಮ್ಮ ಆಜ್ಞೆಯನ್ನು ಪಾಲಿಸುತ್ತೇನೆ ಎಂದು ಹೇಳಿ, ದೇವತೆಗಳು ನಮಗೆ ಉತ್ತಮ ಸಂತತಿ ಕೊಡಲಿ ಎಂದು ಪ್ರಾರ್ಥಿಸಿ ವಧುವಿನ ಬಲಹೊಟ್ಟೆಯನ್ನು ಸ್ಪರ್ಶಿಸಬೇಕು.

೧೨) **ಕಂಕಣಬಂಧನ :** ಗೃಹಸ್ಥ ಜೀವನಕ್ಕೆ ಕಂಕಣಬದ್ಧರಾಗಬೇಕೆಂಬುದು ಈ ವಿಧಿಯ ಆಶಯವಾಗಿದೆ. ಈಗ ಪುರೋಹಿತರು "ಎಲ್ಲೈ ಇಂದ್ರನೇ ! ನಾವು ನಿನ್ನನ್ನು ಪುನಃ ಪ್ರಾರ್ಥಿಸುತ್ತೇವೆ. ನಮ್ಮ ಪ್ರಾರ್ಥನೆಯಿಂದ ಸಂತುಷ್ಟನಾಗಿ ನೀನು ವಧೂವರರಿಗೆ

---

೮) ದೇಶಕಾಲೌಸಂಕೀರ್ತ್ಯ ಅಮುಕಶರ್ಮಾಹಂ ಮಮ ಸಮಸ್ತಪಿತೃಣಾಂ ನಿರತಿಶಯ ಸಾನಂದ ಬ್ರಹ್ಮಲೋಕಾವಾಪ್ತ್ಯಾದಿ ಕನ್ಯಾದಾನಕಲ್ಪೋಕ್ತ ಫಲಾವಾಪ್ತಯೇ ಅನೇನ ವರೇಣಾಸ್ಯಾಂ ಕನ್ಯಾಯಾಮುತ್ಪಾದಯಿಷ್ಯಮಾಣ ಸಂತತ್ಯಾ ದ್ವಾದಶಾವರಾನ್, ದ್ವಾದಶಪರಾಂಶ್ಚ ಪುರುಷಾನ್ ಪವಿತ್ರೀಕರ್ತುಂ ಆತ್ಮನಶ್ಚ ಶ್ರೀಲಕ್ಷ್ಮೀನಾರಾಯಣ ಪ್ರೀತಯೇ ಬ್ರಾಹ್ಮವಿವಾಹ ವಿಧಿನಾ ಕನ್ಯಾದಾನಮಹಂ ಕರಿಷ್ಯೇ ॥

೯) ಧರ್ಮೇಚಾರ್ಥೇ ಚ ಕಾಮೇ ಚ ನಾತಿಚರಿತವ್ಯಾ ತ್ವಯೇಯಂ ॥ ಆಗ ವರನು 'ನಾತಿಚರಾಮಿ' ಎಂದು ಹೇಳಬೇಕು.

ದೀರ್ಘಾಯುಷ್ಯ ಕೊಡು" ಎಂದು ಹೇಳುತ್ತ ವಧೂವರರ ಸುತ್ತಲೂ ಈಶಾನ್ಯದಿಂದ ಪ್ರಾರಂಭಿಸಿ ೫ ಸುತ್ತು ಎರಡೆಳೆದಾರವನ್ನು ಸುತ್ತುವರು. ಆಗ ವರನು ಆ ದಾರವನ್ನು "ಅಭಿಚಾರಾಭಿಮಾನಿಯಾದ ನೀಲವರ್ಣ ಮತ್ತು ರಕ್ತವರ್ಣದ ದೇವತೆಯು ವಧುವಿನಲ್ಲಿರುತ್ತಾಳೆ. ಅವಳನ್ನು ದೂರಮಾಡುವೆನು. ಅದರಿಂದ ವಧುವಿನ ಬಳಗದವರು ಉನ್ನತಿ ಹೊಂದುವರು ಮತ್ತು ನಾವು ಪರಸ್ಪರ ಪ್ರೀತಿಯಿಂದ ಇರುವೆವು" ಎಂದು ಹೇಳಿ ದಾರವನ್ನು ವಧುವಿನ ಎಡಗೈಯಲ್ಲಿ ಕಟ್ಟುತ್ತಾನೆ. ವಧುವು ದಾರವನ್ನು (ಅರಿಷಿಣ ಸಹಿತ) ವರನ ಬಲಗೈಯಲ್ಲಿ ಕಟ್ಟುತ್ತಾಳೆ.[೧೦]

೧೩) **ಅಕ್ಷತಾರೋಪಣ :** ವಧೂವರರು 'ನಮ್ಮ ಸುಖ, ಯಜ್ಞ, ಸಂಪತ್ತು, ಧರ್ಮ, ಸಂತಾನ, ಕೀರ್ತಿ ಮೊದಲಾದ ಇಚ್ಛೆಗಳು ಪೂರ್ಣವಾಗಲಿ' ಎಂಬುದಾಗಿ ಹೇಳುತ್ತ ಪರಸ್ಪರವಾಗಿ ತಲೆಯ ಮೇಲೆ ಹಾಲು, ತುಪ್ಪದಿಂದ ತೊಯ್ದ ಅಕ್ಕಿಕಾಳು (ಮಂತ್ರಾಕ್ಷತೆ) ಗಳನ್ನು ಹಾಕುತ್ತಾರೆ.[೧೧] ನಂತರ ಪುಷ್ಪಮಾಲೆಯನ್ನು ವಧುವು ವರನ ಕಂಠದಲ್ಲಿ, ವರನು ವಧುವಿನ ಕಂಠದಲ್ಲಿ ಹಾಕುತ್ತಾನೆ.

೧೪) **ಮಾಂಗಲ್ಯ ಬಂಧನ :** ಈ ವಿಧಿಯಲ್ಲಿ ವರನು ವಧುವಿನ ಕೊರಳಲ್ಲಿ ಕರಿಮಣಿಗಳನ್ನು ಪೋಣಿಸಿದ ಮಂಗಲಸೂತ್ರವನ್ನು ಕಟ್ಟುತ್ತಾನೆ. ಈ ಮಂಗಲಸೂತ್ರವು ಕನ್ಯೆಗೆ ಮಾಂಗಲ್ಯ ಸೂಚಕವಾಗಿರುತ್ತದೆ. ಇದು ದಾರದಲ್ಲಿ ಪೋಣಿಸಿದ್ದೇ ಆಗಿರಬೇಕು. ಬಂಗಾರದಲ್ಲಿ ಕಟ್ಟಿದ ಮಂಗಲಸೂತ್ರವು ಕೇವಲ ಆಭರಣವೆನಿಸುತ್ತದೆ ಕಾರಣ ಅದೊಂದನ್ನೇ ಉಪಯೋಗಿಸಬಾರದು. ಅದನ್ನು ಕಟ್ಟುವಾಗ ವರನು ಎಲೈ ಪತಿವ್ರತೆಯೇ ! 'ನನ್ನ' ಜೀವನಕ್ಕೆ ಕಾರಣವಾದ ಈ ಮಂಗಲಸೂತ್ರವನ್ನು ನಿನ್ನ ಕೊರಳಲ್ಲಿ ಕಟ್ಟುತ್ತಿರುವೆನು. ನೀನು ನನ್ನ ಜೊತೆಯಲ್ಲಿ ನೂರು ವರ್ಷಕಾಲ ಸುಖವಾಗಿ ಬಾಳು ಎಂಬುದಾಗಿ ಹೇಳುತ್ತಾನೆ.[೧೨]

---

೧೦) ಓಂ ನೀಲಲೋಹಿತಂ ಭವತಿ ಕೃತ್ಯಾಸಕ್ತಿರ್ವ್ಯಜ್ಯತೇ ।
ಏಧಂತೇ ಅಸ್ಯಾ ಜ್ಞಾತಯಃ ಪತಿರ್ಬಂಧೇಷು ಬಧ್ಯತೇ ॥

೧೧) ವರನು ಯಜ್ಞೋ ಮೇ ಕಾಮಃ ಸಮೃಧ್ಯತಾಮ್ । ವಧುವು ಭಗೋ ಮೇ ಕಾಮಃ ಸಮೃಧ್ಯತಾಮ್।
ವರನು ಧರ್ಮೋ ಮೇ ಕಾಮಃ ಸಮೃಧ್ಯತಾಮ್। ವಧುವು ಶ್ರಿಯೋ ಮೇ ಕಾಮಃ ಸಮೃಧ್ಯತಾಮ್।
ವರನು ಯಶೋ ಮೇ ಕಾಮಃ ಸಮೃಧ್ಯತಾಮ್ । ವಧುವು ಪ್ರಜಾ ಮೇ ಕಾಮಃ ಸಮೃಧ್ಯತಾಮ್।
ತತಃ ಪುಷ್ಪಮಾಲಾಂ ಕನ್ಯಾ ವರಕಂಠೇ, ವರೋಽಪಿ ಕನ್ಯಾ ಕಂಠೇ ನಿದಧ್ಯಾತ್ ॥

೧೨) ಮಾಂಗಲ್ಯ ತಂತುನಾನೇನ ಮಮ ಜೀವನ ಹೇತುನಾ ।
ಕಂಠೇ ಬಧ್ನಾಮಿ ಸುಭಗೇ ಜೀವಾತು ಶರದಃ ಶತಮ್ ॥ (ಚಿರಂಜೀವ ಮಯಾಸಹ)

೧೫) **ವಿವಾಹ ಹೋಮ :** ವರನು 'ಯೋಜಕ' ಎಂಬ ಅಗ್ನಿಯನ್ನು ಆವಾಹಿಸಿ, "ಅಗ್ನಿಯೇ! ಧರ್ಮಕಾರ್ಯಗಳಿಗೆ ನಿನ್ನನ್ನು ಆವಾಹಿಸುತ್ತೇನೆ. ನೀನು ನಮಗೆ ಸಾಮರ್ಥ್ಯವನ್ನು, ಧನವನ್ನು ಕೊಡು, ನಮ್ಮಿಬ್ಬರ ಮನಸ್ಸು ಒಂದಾಗುವಂತೆ ಮಾಡು. ಪ್ರಜಾಪತಿಯ ಅನುಗ್ರಹದಿಂದ ನಾವು ಸಮೃದ್ಧಿಯನ್ನು ಹೊಂದೋಣ" ಎಂದು ಹೇಳುತ್ತ ತುಪ್ಪದ ಆಹುತಿ ಹಾಕುವನು. ಇದರಿಂದ ಗೃಹ್ಯಾಗ್ನಿ ಸಿದ್ಧಿಯೂ ಆಗುತ್ತದೆ. (ಈ ಗಾರ್ಹಪತ್ಯಾಗ್ನಿಯನ್ನು ಗೃಹಸ್ಥನು ಮುಂದುವರಿಸಿಕೊಂಡು ಹೋಗಬೇಕು. ಅವನ ಕೊನೆಯ ಸಂಸ್ಕಾರವನ್ನು ಈ ಅಗ್ನಿಯಲ್ಲಿ ಮಾಡುವುದೂ ಉಂಟು).

೧೬) **ಪಾಣಿಗ್ರಹಣ :** ವರನು ವಧುವಿಗೆ "ಭಾಗ್ಯಶಾಲಿಯೇ! ನಾವು ದೀರ್ಘಕಾಲ ಬಾಳುವದಕ್ಕೋಸ್ಕರ ನಿನಗೆ ಸೌಭಾಗ್ಯ ಸಿಗುವದಕ್ಕೋಸ್ಕರ ನಿನ್ನ ಕೈಯನ್ನು ನನ್ನ ಕೈಯಲ್ಲಿ ಸ್ವೀಕರಿಸುತ್ತಿರುವೆನು. ಭಗ, ಅರ್ಯಮಾ, ಸವಿತಾ, ಪೂಷಾ ಈ ನಾಲ್ವರು ದೇವತೆಗಳು ಗೃಹಸ್ಥಾಶ್ರಮ ಪರಿಪಾಲನೆಗೋಸ್ಕರ ನಿನ್ನನ್ನು ನನ್ನ ಅಧೀನಮಾಡಿರುವರು".[೧೩] ಎಂದು ಹೇಳಿ ಅವಳ ಬಲಗೈಯನ್ನು ತನ್ನ ಕೈಯಲ್ಲಿ ಹಿಡಿಯುತ್ತಾನೆ. ಅಗ್ನಿಯ ಸಮ್ಮುಖದಲ್ಲಿ ವಧುವಿನ ಕೈಹಿಡಿದು ವರನು ಅವಳಿಗೆ ಅಭಯವನ್ನು ಕೊಡುತ್ತಾನೆ.

೧೭) **ಲಾಜಾಹೋಮ :** ಲಾಜಾ ಎಂದರೆ ಭತ್ತದ ಅರಳು. ಈ ಹೋಮವನ್ನು ವಧೂವರರು ಇಬ್ಬರೂ ಕೂಡಿ ಮಾಡುತ್ತಾರೆ. ಭತ್ತದ ಅರಳನ್ನು ವಧುವಿನ ಕೈಯಲ್ಲಿ ಅವಳ ತಮ್ಮನು ಹಾಕುತ್ತಾನೆ. ವರನು "ಎಲೈ! ಅರ್ಯಮಾ, ವರುಣ, ಪೂಷಾ ದೇವತೆಗಳೇ ಈ ಕನ್ಯೆಗೆ ತನ್ನ ತಂದೆ-ತಾಯಿಗಳ, ಬಂಧುಗಳ ಮೇಲಿರುವ ಮೋಹವು ಕಡಿಮೆಯಾಗಿ ನನ್ನ ಮೇಲೆ, ನನ್ನ ತಂದೆ-ತಾಯಿ, ಬಂಧುಗಳ ಮೇಲೆ ಪ್ರೀತಿಯುಂಟಾಗಲಿ. ಇವಳು ನಮ್ಮ ಕುಲವನ್ನು ತ್ಯಜಿಸದಿರಲಿ" ಎಂದು ಹೇಳಿ ವಧುವಿನ ಕೈಯಿಂದ ಭತ್ತದ ಅರಳನ್ನು ಆಹುತಿ ಹಾಕಿಸುತ್ತಾನೆ. ನಂತರ ವಧುವಿಗೆ "ಎಲೈ ವಧುವೇ! ನಾನು ಸಾಮವೇದ ನೀನು ಋಗ್ವೇದ, ನಾನು ಆಕಾಶ, ನೀನು ಪೃಥ್ವಿ, ನಾವು ಅಗ್ನಿ, ಬ್ರಾಹ್ಮಣರ ಸಮ್ಮುಖದಲ್ಲಿ ವಿವಾಹಿತರಾಗಿ ಒಳ್ಳೆಯ ಸಂತಾನ ಪಡೆಯೋಣ, ಪ್ರೀತಿಯಿಂದ ಇರೋಣ, ನಮ್ಮಿಬ್ಬರ ಸ್ವಭಾವಗಳು ಪರಸ್ಪರ ಸೇರುವಂತೆ ಆಗಲಿ. ನಾವಿಬ್ಬರೂ ನಿಷ್ಕಪಟತೆಯಿಂದ ನೂರು ವರ್ಷ ಬಾಳೋಣ ಎಂದು ಹೇಳುತ್ತ ಇಬ್ಬರೂ ಅಗ್ನಿಗೆ ಪ್ರದಕ್ಷಿಣೆ ಹಾಕುತ್ತಾರೆ.[೧೪]

---

೧೩) ಓಂ ಗೃಭ್ಣಾಮಿ ತೇ ಸೌಭಗತ್ವಾಯ ಹಸ್ತಂ ಮಯಾಪತ್ಯಾಜರದಷ್ಟಿರ್ಯಥಾಸಃ ।
ಭಗೋ ಅರ್ಯಮಾ ಸವಿತಾ ಪುರಂಧಿರ್ಮಹ್ಯಂ ತ್ವಾ ದುರ್ಗಾರ್ಹಪತ್ಯಾಯದೇವಾಃ ॥

೧೪) ಓಂ ಅಮೋಹಮಸ್ಮಿಸಾತ್ವಂ ಸಾತ್ವಮಸ್ಯಮೋಹಂ ದ್ಯೌರಹಂ ಪೃಥಿವೀತ್ವಂ ಸಾಮಾಹಮ್ ಋಕ್ತ್ವಂ ತಾವೇಹ ವಿವಾಹವಹೈ ॥
ಪ್ರಜಾಂ ಪ್ರಜನಯಾವಹೈ ಸಂಪ್ರಿಯೌ ರೋಚಿಷ್ಣೂ ಸುಮನಸ್ಯಮಾನೌ ಜೀವೇವ ಶರದಃ ಶತಂ॥

೧೮) **ಅಶ್ಮಾರೋಹಣ :** ವರನು ವಧುವಿಗೆ "ನೀನು ಕಲ್ಲಿನ ಮೇಲೆ ಏರು, ನಿನ್ನ ಮನಸ್ಸನ್ನು ಮತ್ತು ದೇಹವನ್ನು ಕಲ್ಲಿನಂತೆ ಗಟ್ಟಿಮಾಡಿಕೋ, ಹಿತಶತ್ರುಗಳನ್ನು ಸದ್ವರ್ತನೆಯಿಂದ ವಶಮಾಡಿಕೋ" ಎಂದು ಹೇಳಿ ಅವಳನ್ನು ಅಲ್ಲಿ ತಂದಿಟ್ಟ ಒಂದು ಕಲ್ಲಿನ ಮೇಲೆ ಕೈಹಿಡಿದು ಎದ್ದು ನಿಲ್ಲಿಸುತ್ತಾನೆ.[೧೫] ನಂತರ ವರನು ವಧುವಿಗೆ ಕಾಲುಂಗುರಗಳನ್ನು ತೊಡಿಸುತ್ತಾನೆ.

೧೯) **ಸಪ್ತಪದಿ :** ವಿವಾಹ ಸಂಸ್ಕಾರದಲ್ಲಿ 'ಸಪ್ತಪದಿ'ಯು ಅತ್ಯಂತ ಪ್ರಮುಖ ಅಂಗವಾಗಿದೆ. ಇದು ಪೂರ್ತಿಯಾಗಿ ನಡೆಯದಿದ್ದರೆ ವಿವಾಹವು ಸಿದ್ಧಿಯಾಗುವದಿಲ್ಲ. ಜೀವನದಲ್ಲಿ ವಧು-ವರರು ಕಷ್ಟವೇ ಬರಲಿ ಸುಖವೇ ಬರಲಿ ಇಬ್ಬರೂ ಪರಸ್ಪರ ನಿಜವಾದ ಸಂಗಾತಿಗಳು. ಇವರು ಇಡುವ ಒಂದೊಂದು ಹೆಜ್ಜೆಯೂ ಅವರ ಉನ್ನತಿಗಾಗಿ ಇರುತ್ತದೆ.

ಅಗ್ನಿಯ ಉತ್ತರಭಾಗದಲ್ಲಿ ಕುಡಿಬಾಳೆ ಎಲೆಯ ಮೇಲೆ ಅಕ್ಕಿಯ ಏಳು ರಾಶಿಗಳನ್ನು ಹಾಕಬೇಕು. ಅವುಗಳ ಪಡುಭಾಗದಲ್ಲಿ ಪೂರ್ವಕ್ಕೆ ಮುಖಮಾಡಿ ವಧುವನ್ನು ನಿಲ್ಲಿಸಿ ತಾನು ಇದಿರಾಗಿ ನಿಂತು ವರನು ವಧುವಿನ ಬಲಗೈಯನ್ನು ಹಿಡಿದು, ಮೊದಲು ಬಲಗಾಲನ್ನು ಎತ್ತಿ ಇಡುವಂತೆ ಹೇಳಿ ಒಂದೊಂದು ಅಕ್ಕಿಯ ರಾಶಿಯ ಮೇಲೆ ಒಂದೊಂದು ಹೆಜ್ಜೆಗೂ ಒಂದೊಂದು ಉದ್ದೇಶವನ್ನು ಹೇಳುತ್ತ ವರನು ತನ್ನ ಜೊತೆ ನಡೆಸಿಕೊಂಡು ಹೋಗುವನು. ಅವನು ಹೇಳುವ ಮಾತುಗಳು ಈ ರೀತಿಯಾಗಿವೆ. (ಈ ಸಮಯದಲ್ಲಿ ವರನ ಉಪವಸ್ತ್ರದೊಂದಿಗೆ ವಧುವಿನ ಉತ್ತರೀಯ ವಸ್ತ್ರಕ್ಕೆ ಗಂಟು ಹಾಕಬೇಕು) (ಈಶಾನ್ಯ ದಿಕ್ಕಿನ ಕಡೆಗೆ ಹೆಜ್ಜೆ ಇಡಬೇಕು.)

೧. ಹೇ ವಧು ! ನೀನು ನನ್ನ ಸಂಗಾತಿಯಾಗಿ, ಸಮೃದ್ಧ ಅನ್ನಪ್ರಾಪ್ತಿಗಾಗಿ ಮೊದಲನೆಯ ಹೆಜ್ಜೆಯನ್ನಿಡು. ನನ್ನನ್ನು ಅನುಸರಿಸುವವಳಾಗು. ನಾವಿಬ್ಬರೂ ಒಳ್ಳೆಯ ಸಂತಾನವನ್ನು ಪಡೆಯೋಣ. ನಾವು ದೀರ್ಘಾಯುಷಿಗಳಾಗೋಣ.[೧೬]

೨. ಹೇ ವಧು ! ಬಲಸಂವರ್ಧನೆಗಾಗಿ (ಶಕ್ತಿಗಾಗಿ) ನನ್ನೊಂದಿಗೆ ಎರಡನೆಯ ಹೆಜ್ಜೆ ಇಡುವವಳಾಗು.............[೧೭]

೩. ಹೇ ವಧು ! ಐಶ್ವರ್ಯ ಸಂಪ್ರಾಪ್ತಿಗಾಗಿ ನನ್ನೊಂದಿಗೆ ಮೂರನೆಯ ಹೆಜ್ಜೆ ಇಡುವವಳಾಗು...............[೧೮]

---

೧೫) ಓಂ ಇಮಮಶ್ಮಾನಮಾರೋಹಾಶ್ಮೇವ ತ್ವಂ ಸ್ಥಿರಾಭವ ।
ಸಹಸ್ವ ಪೃತನಾಯತೋಽಭಿತಿಷ್ಠ ಪೃತನ್ಯತಃ ॥

೧೬) ಓಂ ಇಷ ಏಕಪದೀ ಭವ ಸಾ ಮಾಮನುವ್ರತಾ ಭವ ವಿಷ್ಣುಸ್ತ್ವಾನಯತು ।
ಪುತ್ರಾನ್ ವಿಂದಾವಹೈ ಬಹೂಂಸ್ತೇ ಸಂತು ಜರದಷ್ಟಯಃ ॥
(ಆಶ್ವಲಾಯನ/ಗೃಹ್ಯಸೂತ್ರ ೧-೭-೧೩)

೧೭) ಓಂ ಊರ್ಜೇ ದ್ವಿಪದೀ ಭವ ಸಾ ಮಾಮನುವ್ರತಾ ಭವ ॥ "

೧೮) ಓಂ ರಾಯಸ್ಪೋಷಾಯ ತ್ರಿಪದೀ ಭವ ॥ "

೪. ಹೇ ವಧು ! ಉತ್ತಮ ಸುಖವೃದ್ಧಿಗಾಗಿ ನಾಲ್ಕನೆಯ ಹೆಜ್ಜೆ ಇಡುವವಳಾಗು...........[೧೯]

೫. ಹೇ ವಧು ! ಉತ್ತಮ ಸಂತತಿಗಾಗಿ ಐದನೆಯ ಹೆಜ್ಜೆ ಇಡುವವಳಾಗು.......[೨೦]

೬. ಹೇ ವಧು ! ಎಲ್ಲ ಋತುಗಳಲ್ಲಿ ಸಿಗುವ ಸುಖಕ್ಕಾಗಿ ಆರನೆ ಹೆಜ್ಜೆ ಇಡುವವಳಾಗು..................[೨೧]

೭. ಹೇ ವಧು ! ನಮ್ಮಿಬ್ಬರಲ್ಲಿ ಸ್ನೇಹವು ವೃದ್ಧಿಯಾಗುವದಕ್ಕಾಗಿ ಏಳನೆ ಹೆಜ್ಜೆ ಇಡುವವಳಾಗು..............[೨೨]

(ಅನಂತರ ವರನು ತನ್ನ ತಲೆಯನ್ನು ವಧುವಿನ ತಲೆಗೆ ಮುಟ್ಟಿಸಿ ಕಲಶೋದಕದಿಂದ ಶಾಂತಿರಸ್ತು ಪುಷ್ಟಿರಸ್ತು ಇತ್ಯಾದಿ ಮಂತ್ರಗಳಿಂದ ವಧುವಿಗೆ ಅಭಿಷೇಕ ಮಾಡುವನು ಅಥವಾ ಪುರೋಹಿತರು ಅಭಿಷೇಕ ಮಾಡುವರು.)

ಭಾರತೀಯ ಪರಂಪರೆಯಲ್ಲಿ ಈ ಸಪ್ತಪದಿಯ ಮೂಲಕ ಬೆಸೆದ ನಂಟಿಗೆ ಬಿಡುಗಡೆ ಎಂಬುದೇ ಇಲ್ಲ. ವಿವಾಹ ಬಂಧನವು ಇಬ್ಬರಿಗೂ ಹೊಣೆಗಾರಿಕೆಯನ್ನು ಕೊಡುತ್ತದೆ. B.L. ಡಿಗ್ರಿಯಲ್ಲಿಯೂ ಕೂಡ Hindu Marriage Act, Section 437 ಪ್ರಕಾರ ಸಪ್ತಪದಿಯ ವಿಚಾರವನ್ನು ಹೇಳಿದೆ. ಇದು ಇಲ್ಲಿ ಗಮನಾರ್ಹವಾಗಿದೆ.

According to Section 437 of Hindu Marriage Act. the ceremonies essential for the Validity of a marriage are-

1. Invocation before the Sacred fire
2. Saptapadi i.e. the taking of Seven steps by the bridegroom and bride jointly before the sacred fire.

The marriage becomes complete only when the seventh step is taken. Till then it is imperfect and revocable.

---

೧೯) ಓಂ ಮಾಯೋ ಭವ್ಯಾಯ ಚತುಷ್ಪದೀ ಭವ ॥
(ಆಶ್ವಲಾಯನ/ಗೃಹ್ಯಸೂತ್ರ ೧-೭-೧೩)

೨೦) ಓಂ ಪ್ರಜಾಭ್ಯಃ ಪಂಚಪದೀ ಭವ ॥ "

೨೧) ಓಂ ಋತುಭ್ಯಃ ಷಟ್ಪದೀ ಭವ ॥ "

೨೨) ಓಂ ಸಖಾ ಸಪ್ತಪದೀ ಭವ ॥ "
**ಸಂಕ್ಷೇಪಾರ್ಥ ಹೀಗಿದೆ :** ೧) ಅನ್ನಮಯ ಜೀವನಕ್ಕೊಂದು ಹೆಜ್ಜೆ, ೨) ಬಲಸಮೃದ್ಧಿಯ ಬಾಳಿಗೊಂದು ಹೆಜ್ಜೆ, ೩) ಧನವರ್ಧನೆಗೆ ಒಂದು ಹೆಜ್ಜೆ , ೪) ಉತ್ತಮ ಸುಖಕ್ಕೆ ಒಂದು ಹೆಜ್ಜೆ, ೫) ಸಂತತಿ ಸೊಗಸಿಗಾಗಿ ಒಂದು ಹೆಜ್ಜೆ, ೬) ಅನುಕೂಲ ಕಾಲಕ್ಕಾಗಿ ಒಂದು ಹೆಜ್ಜೆ, ೭) ಅನುಗಾಲ ಸ್ನೇಹಕ್ಕೆ ಒಂದು ಹೆಜ್ಜೆ.

೨೦) **ಅರುಂಧತೀ ದರ್ಶನ :** ಅನಂತರ ವರನು ಸಾಯಂಕಾಲ ಸಂಧ್ಯಾವಂದನೆಯನ್ನು ಮುಗಿಸಿಕೊಂಡು (ಸಾಯಂಕಾಲದಲ್ಲಿ), ಗೋಧೂಳಿ ಮುಹೂರ್ತವಿದ್ದರೆ ಸಂಧ್ಯಾವಂದನದ ಪೂರ್ವದಲ್ಲಿ ವಧುವನ್ನು ಹೊರಗೆ ಕರೆದುಕೊಂಡು ಹೋಗಿ ಸಪ್ತರ್ಷಿ ಮಂಡಲವನ್ನು, ಅರುಂಧತಿ ಹಾಗೂ ಧ್ರುವನಕ್ಷತ್ರಗಳನ್ನು ತೋರಿಸಬೇಕು.

ಸಪ್ತರ್ಷಿಗಳಲ್ಲಿ ಒಬ್ಬರಾದ ವಸಿಷ್ಠರ ಪತ್ನಿಯೇ ಅರುಂಧತಿಯು. ಇವಳು ಮಹಾಪತಿವ್ರತೆ. ಉಳಿದ ಆರು ಋಷಿ ಪತ್ನಿಯರು ಸಪ್ತರ್ಷಿ ಮಂಡಲದಲ್ಲಿ ಇರುವದಿಲ್ಲ. ಕೇವಲ ಅರುಂಧತಿಗೆ ಮಾತ್ರ ಅಲ್ಲಿ ಸ್ಥಾನವಿದೆ. ವಸಿಷ್ಠ ಅರುಂಧತಿಯರಂತೆ ವಧೂವರರು ಎಂದೆಂದಿಗೂ ಬೇರ್ಪಡದ ಜೋಡಿಯಾಗಿರಬೇಕೆಂಬುದೇ ಅರುಂಧತಿ ದರ್ಶನದ ಹಿಂದಿರುವ ಉದ್ದೇಶವಾಗಿದೆ.

ಇವುಗಳನ್ನು ತೋರಿಸಿದಾಗ ವಧುವು "ನನ್ನ ಪತಿಯು ಶತಾಯುಷಿಯಾಗಲಿ, ನನಗೆ ಯೋಗ್ಯ ಸಂತತಿಯಾಗಲಿ" ಎಂದು ನಾನು ಇಚ್ಛಿಸುತ್ತೇನೆಂದು ಹೇಳಿ ಸಪ್ತರ್ಷಿ ಹಾಗೂ ಅರುಂಧತಿಯರ ದರ್ಶನ ಪಡೆಯುವಳು.[೨೩]

೨೧) **ಗೃಹಪ್ರವೇಶಿನೀಯ ಹೋಮ :** ವರನು ಈ ಹೋಮವನ್ನು ತನ್ನ ಮನೆಯಲ್ಲಿ ಮಾಡಬೇಕು. ಹೀಗೆ ಪ್ರಾರ್ಥಿಸಬೇಕು- ೧) ಪ್ರಜಾಪತಿಯು ನಮಗೆ ಒಳ್ಳೆಯ ಮಕ್ಕಳನ್ನು ಕೊಡಲಿ, ಅರ್ಯಮಾ ನಮಗೆ ದೀರ್ಘಾಯುಷ್ಯ ಕೊಡಲಿ, ವಧುವೇ ! ನೀನು ನನಗೆ ಅತಿ ಪ್ರೀತ್ಯಾಸ್ಪದಳೂ, ನನ್ನ ಆಪ್ತೇಷ್ಟರಿಗೆ ಸುಖದಾಯಕಳೂ ಆಗು. ೨) ಎಲೈ ವಧುವೇ ! ನೀನು ಶುಭದೃಷ್ಟಿಯುಳ್ಳವಳು. ಗಂಡನಿಗೆ ಹಿತದಾಯಕಳು, ಪಶುಗಳಿಗೆ ಸುಖದಾಯಕಳು, ಒಳ್ಳೆಯ ಮನಸ್ಸಿನವಳು, ಕಾಂತಿಯುಕ್ತಳು, ವೀರ ಧೀರ ಸಂತಾನ ಪಡೆಯುವವಳು, ಶ್ರದ್ಧಾಳುವು, ಸುಖಪ್ರದಳು ಆಗು. ೩) ಎಲೈ ವಧುವೇ ! ನೀನು ನಿನ್ನ ಒಳ್ಳೆಯ ವ್ಯವಹಾರದಿಂದ ಅತ್ತೆ, ಮಾವ, ಮೈದುನ, ಭಾವ, ನಾದಿನಿ, ಅತ್ತಿಗೆಯರಿಗೆ ಪ್ರೀತ್ಯಾಸ್ಪದಳಾಗು. ೪) ಎಲೈ ಇಂದ್ರನೇ ! ಈ ವಧುವು ಸುಪುತ್ರದಾಯಕಳೂ ಭಾಗ್ಯಶಾಲಿಯೂ ಆಗುವಂತೆ ಮಾಡು.[೨೪]

೨೨) **ಹೃದಯಸ್ಪರ್ಶ :** ವರನು "ಎಲ್ಲ ದೇವತೆಗಳು ನಮ್ಮ ಮನಸ್ಸನ್ನು ಉದಾರವನ್ನಾಗಿ ಮಾಡಲಿ, ನಮ್ಮ ಮನಸ್ಸು ಸುಸಂಸ್ಕೃತವಾಗಲಿ, ಮಾತರಿಶ್ವಾ, ಪ್ರಜಾಪತಿ, ಸರಸ್ವತಿಯರು ನಮ್ಮಿಬ್ಬರ ಮನಸ್ಸುಗಳನ್ನು ಒಂದುಗೂಡುವಂತೆ ಮಾಡಲಿ" ಎಂದು ಹೇಳಿ

---

೨೩) "ಜೀವ ಪತ್ನೀ ಪ್ರಜಾಂ ವಿಂದೇಯ" ಇತಿ ವಧ್ವಾವಾಚಯೇತ್

೨೪) ಆನಃ ಪ್ರಜಾಂ ಜನಯತು ಇತ್ಯಾದಿ ೪ ಮಂತ್ರಗಳನ್ನು ಹೇಳುತ್ತ ವರನು ಸೂರ್ಯ, ಸಾವಿತ್ರಿಯರಿಗೆ ಆಹುತಿಗಳನ್ನು ಹಾಕಬೇಕು.

ಹೋಮ ಶೇಷ ತುಪ್ಪವನ್ನು ತನ್ನ ಕೈಗೆ ಹಚ್ಚಿಕೊಂಡು ವಧುವಿನ ಎದೆಯನ್ನು ಸ್ಪರ್ಶಿಸಬೇಕು.[೨೫]

೨೩) ತ್ರಿರಾತ್ರವ್ರತ : ಇದಾದ ಮೇಲೆ ವಧೂವರರು ಮೂರುದಿನ ನೆಲದ ಮೇಲೆ ಒಂದೇ ಹಾಸಿಗೆಯಲ್ಲಿ ಮಲಗಬೇಕು. ಆದರೆ ಬ್ರಹ್ಮಚರ್ಯ ವ್ರತ ಪಾಲಿಸಬೇಕು. ವಧೂವರರ ಮಧ್ಯದಲ್ಲಿ ಒಂದು ಔದುಂಬರ ಮರದ ತುಂಡನ್ನು ಇಟ್ಟು ಅದಕ್ಕೆ ಗಂಧ ಹಚ್ಚಿ ವಸ್ತ್ರ ಅಥವಾ ಸೂತ್ರವನ್ನು ಕಟ್ಟಬೇಕು. ಮೂರುದಿನ ಈ ರೀತಿ ಮಲಗಿ ನಾಲ್ಕನೆಯದಿನ ಉದಿಷ್ವಾರ್ತಃ ಪತೀವತಿ ಹಾಗೂ ಉದೀಷ್ವಾರ್ತೋ ಎಂಬ ಋಗ್ವೇದ ಮಂತ್ರಗಳನ್ನು ಹೇಳುತ್ತ ಆ ಔದುಂಬರ ಕಾಷ್ಠವನ್ನು ಜಲದಲ್ಲಿ ವಿಸರ್ಜಿಸಬೇಕು.

೨೪) ನಿಷೇಕ ಪ್ರಸ್ತ : ವರನು ನಾಲ್ಕನೆಯ ದಿನ ಭುವನೇಶ್ವರೀ ಶಾಂತಿಯನ್ನು ಮಾಡಿಕೊಂಡು (ಅವಳ ದೇಹಶುದ್ಧಿ ಹಾಗೂ ಪ್ರೌಢಕನ್ಯಾ ವಿವಾಹ ದೋಷನಿವಾರಣೆಗಾಗಿ) ಅನಂತರ ಶಾಸ್ತ್ರೋಕ್ತ ವಿಧಿಯಿಂದ ಮಂತ್ರ ಪುರಸ್ಸರವಾಗಿ ವಧುವನ್ನು ತನ್ನ ಶಯ್ಯೆಗೆ ಸ್ವೀಕರಿಸಬೇಕು. ಗರ್ಭಾದಾನ ಹೋಮ ಮಾಡಿಸಿ ಹತ್ತುಜನ ಬ್ರಾಹ್ಮಣರ ಭೋಜನ ಮಾಡಿಸಬೇಕು. "ದಂಪತಿಗಳಲ್ಲಿ ಭಗವಂತನ ಸನ್ನಿಧಾನವಿದೆ. ಭಾರ್ಯೆಯಲ್ಲಿ ಭಾರತಿಯೂ, ಭರ್ತೃವಿನಲ್ಲಿ ಪ್ರಾಣನೂ ಇದ್ದಾರೆ. ಪ್ರಜಾಪತಿನಾಮಕ ಭಗವಂತನು ರಾತ್ರಿಯಲ್ಲಿ ಪ್ರಾಣ, ಭಾರತಿಯರ ಸನ್ನಿಧಾನಕ್ಕೆ ಪಾತ್ರರಾದ ದಂಪತಿಗಳ ಮೂಲಕ ಸೃಷ್ಟಿಕಾರ್ಯವನ್ನು ನಡೆಸುವನು. ಈ ರೀತಿಯಾಗಿ ಸ್ತ್ರೀ ಪುರುಷರ ಸಂಬಂಧದಲ್ಲಿರುವ ವಿಶೇಷವನ್ನು ತಿಳಿದವನು ಸಂಸಾರದಿಂದ ಮುಕ್ತನಾಗುತ್ತಾನೆ" ಎಂಬುದಾಗಿ ಪ್ರಜಾಪತಿ ಸಂಹಿತೆ (ಷಟ್‌ಪ್ರಶ್ನಭಾಷ್ಯ)ಯಲ್ಲಿ ಹೇಳಲಾಗಿದೆ.[೨೬] ಈ ಕಾರ್ಯವನ್ನು ವಿವಾಹದ ದಿನವೇ ಮಾಡುವದು ತಪ್ಪು. ಪತಿಪತ್ನಿಯರು ಸೇರುವ ಈ ಕಾರ್ಯವನ್ನು "ವಾಮದೇವಯಜ್ಞ" ವೆಂದು ಕರೆಯುತ್ತಾರೆಂಬ ಅನುಸಂಧಾನವಿರಬೇಕಾದುದು ಅವಶ್ಯ.

೨೫) ಅಷ್ಟಪುತ್ರೀ ವಿಸರ್ಜನ : ವಧುವು ಗೌರೀಹರಪೂಜೆಯ ಸಂದರ್ಭದಲ್ಲಿ ಹಳದೀ ಬಣ್ಣದ ಸೀರೆಯನ್ನು ಉಟ್ಟಿರುತ್ತಾಳೆ. ಅದು ಮಾಂಗಲ್ಯ ಬಂಧನದವರೆಗೆ ಹಾಗೇ ಇರಬೇಕು. ತ್ರಿರಾತ್ರ ವ್ರತದಲ್ಲಿ ಆ ಸೀರೆ ಉಟ್ಟುಕೊಳ್ಳಬೇಕು. ಅನಂತರ ನಾಲ್ಕನೆಯ ದಿನ ಆ ಸೀರೆಯನ್ನು (ಸತ್ಯೇನೋತ್ತಭಿತಾ ಈ ಸೂರ್ಯಾಸೂಕ್ತದ ಅರ್ಥವನ್ನು ಬಲ್ಲ) ಬ್ರಾಹ್ಮಣನಿಗೆ ದಾನ ಕೊಡಬೇಕು. ಈ ದಾನದ ಸಂದರ್ಭದಲ್ಲಿ ವರನು

---

೨೫) ಸಮಂಜಂತು ವಿಶ್ವೇದೇವಾಃ ಸಮಾಪೋ ಹೃದಯಾನಿ ನೌ ।
ಸಂಮಾತರಿಶ್ವಾ ಸಂಧಾತಾ ಸಮುದೇಷ್ಟ್ರೀ ದಧಾತು ನೌ ॥

೨೬) ದಂಪತ್ಯೋ ರ್ಭಗವಾನ್ ವಿಷ್ಣುಃ ಭಾರ್ಯಾಸ್ಥಾತು ಸರಸ್ವತೀ ।
ಭರ್ತೃಸ್ಥಃ ಸ್ವಯಂ ವಾಯುಃ ಏವಂ ಜಾನನ್ ವಿಮುಚ್ಯತೇ ॥
(ಷಟ್‌ಪ್ರಶ್ನಭಾಷ್ಯ ಪ್ರಜಾಪತಿ ಸಂಹಿತೆ)

"ಸೋಮಾದ್ಯುಪಭುಕ್ತ ದೋಷಪರಿಹಾರಕ್ಕಾಗಿ ವಧೂವಸ್ತ್ರವನ್ನು ದಾನವಾಗಿ ಕೊಡುತ್ತೇನೆ" ಎಂದು ಸಂಕಲ್ಪಮಾಡಬೇಕು. ಬ್ರಾಹ್ಮಣರ ಭೋಜನ ಮಾಡಿಸಬೇಕು. ಅವಶ್ಯವಾಗಿ ಮಾಡಲೇಬೇಕಾದ ಕಾರ್ಯಗಳಲ್ಲಿ ಈ ವಸ್ತ್ರದ ತ್ಯಾಗವೂ ಒಂದಾಗಿವೆ. ಇಲ್ಲದಿದ್ದರೆ ಆ ವಸ್ತ್ರದ ಸಂಗದಿಂದ ಪತಿಯಾದವನು ತೇಜಸ್ಸಿನಿಂದ ಹೀನನಾಗಿ ರೋಗಿಯಾಗುತ್ತಾನೆ.

೨೬) **ವರಬಂಧು ಪೂಜನ :** ವಿವಾಹಕಾರ್ಯದ ನಾಲ್ಕನೆಯ ದಿನ ವರನ ತಂದೆ ತಾಯಿ ಬಂಧು ಬಳಗದವರಿಗೆ ವಸ್ತ್ರ ಉಡುಗೊರೆಗಳನ್ನು ಕೊಡಬೇಕು, ಆದರಿಸಬೇಕು.

೨೭) **ನಾಗೋಲಿ ಅಥವಾ ವಸಂತ ಪೂಜೆ :** ಮಧ್ಯದಲ್ಲಿ ಒಂದು ಕಲಶ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಕಲಶಗಳನ್ನಿತ್ತು ಅವುಗಳ ಮೇಲೆ ಹಾಲಿನಲ್ಲಿ ಗೋದಿಹಿಟ್ಟು, ಅರಿಷಣದಿಂದ ಮಾಡಿದ ಎರಡೆರಡು ದೀಪದ ಪ್ರಣತಿಗಳನ್ನು ಇಟ್ಟು ಅದರ ಕೆಳಗೆ ಮಾವಿನ ಎಲೆಗಳನ್ನು ಇಡಬೇಕು. ದೀಪಗಳನ್ನು ಹಚ್ಚಿ ಕಾಲರೂಪಿಯಾದ ವಸಂತ ನಾಮಕ ಭಗವಂತನನ್ನು ಪೂಜಿಸಿ 'ಪುಷ್ಪಶರೀರಿಯಾದ ಕಾಮವನ್ನು ವಶದಲ್ಲಿಟ್ಟುಕೊಂಡ, ಕಾಲರೂಪಿಯೂ, ಸರ್ವತ್ರವ್ಯಾಪ್ತನಾದ ವಸಂತನು ನಮ್ಮ ಸದಿಚ್ಛೆಗಳನ್ನು ಪೂರೈಸಲಿ" ಎಂದು ಹೇಳಿ ವಸಂತರೂಪೀ ಭಗವಂತನಿಗೆ ನಮಸ್ಕರಿಸಬೇಕು. ಅನಂತರ ಅಪೂಪ ಅಥವಾ ಹೋಳಿಗೆಗಳನ್ನು ದಿಕ್ಪಾಲಕರಿಗೆ ಬಲಿಕೊಡಬೇಕು. ಈ ಕಾಲದಲ್ಲಿ ವರಪಕ್ಷದವರು ವಧುವಿಗೆ ರೇಶಿಮೆವಸ್ತ್ರ, ಸುವರ್ಣಾಭರಣಗಳನ್ನು ಕೊಟ್ಟು ಉಡಿ ತುಂಬಿದ ಮೇಲೆ ವರನು ಅವಳ ಬೈತಲೆಯನ್ನು 'ಸಿಂಧೂರ'ದಿಂದ ಅಲಂಕರಿಸುವನು.

೨೮) **ಐರಿಣೀಪೂಜೆ ಐರಿಣಿದಾನ, ಕೂಸು ಒಪ್ಪಿಸುವದು :** ತಮ್ಮ ಮಗಳ ವಂಶವು ಅಭಿವೃದ್ಧಿಯಾಗುವದಕ್ಕೋಸ್ಕರ ಬಿದಿರಿನ ಬುಟ್ಟಿ ಅಥವಾ ಮೊರದಲ್ಲಿ ೧೬ ಚಿಕ್ಕ ಮೊರಗಳನ್ನು, ೧೧ ಕರಚೀಕಾಯಿ (ಗಿಲಗಂಚಿ), ಪಕ್ವಾನ್ನ, ಬಂಗಾರ ಇತ್ಯಾದಿಗಳನ್ನು ಇಡಬೇಕು. ಅದರಲ್ಲಿ ಎರಡು ದೀಪಗಳನ್ನಿಟ್ಟು ಕನ್ಯೆಯ ತಂದೆಯು ಉಮಾಮಹೇಶ್ವರರನ್ನು ಪೂಜಿಸಬೇಕು ಮತ್ತು ಇದನ್ನು ವರನ ತಾಯಿಗೆ ಕೊಡುತ್ತೇನೆಂದು ಸಂಕಲ್ಪಿಸಿ ಮಗಳ ವಂಶವು ವಿಸ್ತರಿಸಲಿ ಎಂದು ಪ್ರಾರ್ಥಿಸಬೇಕು.[೨೭] (ಐರಣಿದಾನವನ್ನು ವರನ ತಾಯಿಗೆ ಕೊಡುವ ಮೊದಲು ಕನ್ಯೆಯ ತಾಯಿಯನ್ನು ವರನ ತಾಯಿಯು ಪೂಜಿಸಿ

---

೨೭) ಅದ್ಯ ಶುಭತಿಥೌ ಮಮ ಉಮಾಮಹೇಶ್ವರಿ ಪ್ರೀತಿದ್ವಾರಾ ಕನ್ಯಾದಾನ ಫಲಸಂಪೂರ್ಣತಾವಾಪ್ತ್ಯಯೇ ವಂಶಾಭಿವೃದ್ಧಯೇ ಚ ಐರಿಣಿ ಪೂಜನಂ ವರಮಾತ್ರೇ ಐರಿಣೀದಾನಂ ಚ ಕರಿಷ್ಯೇ ॥ ಎಂದು ಸಂಕಲ್ಪಮಾಡಬೇಕು.
ಐರಿಣಿ ತ್ವಮುಮಾದೇವಿ ಮಹೇಶೋ ಗಿರಿಜಾ ಪತಿಃ ।
ಅತಸ್ತ್ವಾಂ ಪೂಜಯಿಷ್ಯಾಮಿ ಐರಿಣೀಂ ಸರ್ವಕಾಮದಾಂ ॥
ಸವಸ್ತ್ರಾಂ ಸದೀಪಾಂ ಚ ಶೂರ್ಪೈಃ ಷೋಡಶಭಿರ್ಯುತಾಂ ।
ವರಮಾತ್ರೇ ಪ್ರದಾಸ್ಯಾಮಿ ಕನ್ಯಾದಾನಸ್ಯ ಸಿದ್ಧಯೇ ॥ ಎಂದು ಪ್ರಾರ್ಥಿಸಬೇಕು

"ತಾಯಿ ಹೊಟ್ಟೆ ತಣ್ಣಗಿರಿಸಲು" ಸೀರೆ ಕುಪ್ಪಸ ಕೊಡಬೇಕು. ಅವಳು ಅದನ್ನು ಉಟ್ಟುಕೊಂಡು ಈ ಪಾತ್ರೆಯನ್ನು ತಲೆಯಮೇಲೆ ಇಟ್ಟುಕೊಂಡು (ಸಿಂಧೂಪ) ವಸಂತ ಕಲಶಗಳಿಗೆ ಪ್ರದಕ್ಷಿಣೆ ಮಾಡಬೇಕು. ಆಗ ಕನ್ಯೆಯ ಸೋದರ ಮಾವನು ಒಂದು ಅಸ್ತ್ರಕ್ಕೆ (ಚಾಕು) ಲಿಂಬೆಹಣ್ಣನ್ನು ಚುಚ್ಚಿ ಆ ಬುಟ್ಟಿಯ ಮೇಲೆ ಇರುವ ದೀಪದ ಮೇಲೆ ಹಿಡಿಯಬೇಕು. ಮತ್ತು ಅದಕ್ಕೆ ಹತ್ತಿದ ಕಾಡಿಗೆಯನ್ನು ವಧೂವರರ ಗಲ್ಲಕ್ಕೆ ಹಚ್ಚಬೇಕು. ಆ ಮೇಲೆ ಇದನ್ನು ವರನ ತಾಯಿಗೆ, ಕನ್ಯೆಯ ತಂದೆಯು ಕೊಡಬೇಕು.)

ಅನಂತರ ಕನ್ಯೆಯನ್ನು ವರನ ತಂದೆ ತಾಯಿ ಮೊದಲಾದ ಹಿರಿಯ ಬಂಧುಗಳ ಹತ್ತಿರ ಕೂಡಿಸಿ ಈ ಬುಟ್ಟಿಯನ್ನು ಅವರ ತಲೆಯ ಮೇಲೆ ಇಟ್ಟು ಕನ್ಯೆಯ ತಂದೆತಾಯಿಗಳು "ನಾವು ಇಲ್ಲಿಯವರೆಗೆ ಇವಳನ್ನು ಮಗನಂತೆ ಪಾಲಿಸಿರುವೆವು, ಇಂದು ಇವಳನ್ನು ನಿಮ್ಮ ಮಗನಿಗೆ ಕೊಟ್ಟಿರುವೆವು. ನೀವೆಲ್ಲರೂ ಸ್ನೇಹದಿಂದ ಪಾಲಿಸಬೇಕು"[೨೮] ಎಂದು ಪ್ರಾರ್ಥಿಸಬೇಕು. ಅವರು ಹಾಗೇ ಆಗಲಿ ಎಂದು ಹೇಳಬೇಕು.

೨೯) ದಿಗ್ಗಜ ಪೂಜೆ : ಸೌಭಾಗ್ಯದ ಅಭಿವೃದ್ಧಿಗೋಸ್ಕರ ಗೋದಿ ಹಾಗೂ ಉಪ್ಪಿನಿಂದ ಭದ್ರ ಮಾತಂಗಗಳನ್ನು ಮಾಡಿ ವಧೂವರರು ಪೂಜಿಸಬೇಕು. ನಂತರ ವಧೂವರರಿಗೆ ಅಖಂಡ ಸೌಭಾಗ್ಯ ಸಂಪತ್ತುಗಳು ಸಿಕ್ಕಲಿ ಎಂಬ ಭಾವನೆಯಿಂದ ವಾಯನದಾನ (ದಕ್ಷಿಣೆ ಸಹಿತ) ಕೊಡಬೇಕು.[೨೯] ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು.

೩೦) ಗೃಹಪ್ರವೇಶ : ಮೇಲಿನ ಎಲ್ಲ ಕಾರ್ಯಗಳು ಮುಗಿದ ಮೇಲೆ ಮಂಗಳ ಗೀತವಾದ್ಯಗಳೊಂದಿಗೆ ವಿವಾಹಿತ ಮಗಳನ್ನು ಅವಳ ಪತಿಯ ಜೊತೆಯಲ್ಲಿ ಅವರ ಮನೆಗೆ ಕಳಿಸಿಕೊಡಬೇಕು. ವರಪಕ್ಷದವರು ಇವಳನ್ನು "ಮಹಾಲಕ್ಷ್ಮೀ ಸನ್ನಿಧಾನ ಯುಕ್ತಳಾದವಳು" ಎಂದು ತಿಳಿದು ಹೊಸ್ತಿಲಲ್ಲಿ ಧಾನ್ಯ ಹಾಗೂ ಸುವರ್ಣಪೂರ್ಣ ಪಾತ್ರೆಯಿಟ್ಟು ಅವಳ ಬಲಗಾಲಿನಿಂದ ಉರುಳಿಸಿ ಆದರಪೂರ್ವಕ ಸ್ವೀಕಾರ ಮಾಡಬೇಕು. ಅನಂತರ ಪುಣ್ಯಾಹವಾಚನ ಗಣಪತಿ, ವರುಣಪೂಜೆ, ಮಾಡಿಸಿಕೊಂಡು ಅವಳಿಗೆ ಹೆಸರನ್ನು ಇಡಬೇಕು. ಈ ಕಾಲದಲ್ಲಿ ವರನು "ಎಲೈ ವಧುವೇ ! ನೀನು ಈ ನನ್ನ ಮನೆಯಲ್ಲಿ ನಿನ್ನಲ್ಲಿ ಹುಟ್ಟುವ ಮಕ್ಕಳ ಸಹಿತವಾಗಿ ಎಲ್ಲರಿಗೂ ಪ್ರಿಯಳಾಗು. ಮನೆಯ ಯಜಮಾನ, ಗಂಡ, ಮೊದಲಾದ ಹಿರಿಯರಿಗೆ ಆದರ ತೋರು; ನಾವು ಈ ಮನೆಯಲ್ಲಿ ವೃದ್ಧರಾಗೋಣ,

---

೨೮) ಪೂರ್ಣವರ್ಷಾತ್ತ್ವಿಯಂ ಕನ್ಯಾ ಪುತ್ರವತ್ಪಾಲಿತಾ ಮಯಾ ।
ಇದಾನೀಂ ತವ ಪುತ್ರಾಯ ದತ್ತಾ ಸ್ನೇಹೇನ ಪಾಲ್ಯತಾಂ ॥

೨೯) ಸೌಭಾಗ್ಯಾದಿ ವೃದ್ಧಯೇ ಬ್ರಾಹ್ಮಣ ಸುವಾಸಿನಿಭ್ಯೋ ವಾಯನಾನಿ ದತ್ವಾ ಬ್ರಾಹ್ಮಣೇಭ್ಯೋ ಯಥಾಶಕ್ತಿ ಭೂಯಸೀಂ ದಕ್ಷಿಣಾಂ ಚ ದತ್ವಾ ಕರ್ಮ ಉಮಾಮಹೇಶ್ವರಾರ್ಪಣಂ ಕುರ್ಯಾತ್ ॥

ಜನರಿಂದ ಹೊಗಳಿಸಿಕೊಳ್ಳೋಣ"[೩೦] ಎಂದು ಹೇಳಿ ಆಚಾರ ಪ್ರಾಪ್ತವಾದ ಲಕ್ಷ್ಮೀ ಪೂಜೆಯನ್ನು ಮಾಡಬೇಕು.

೩೧) **ದೇವತೋತ್ಥಾಪನ - ಮಂಡಪೋದ್ವಾಸನ :** ವಿವಾಹದ ಆರಂಭದಲ್ಲಿ ಆವಾಹಿಸಿ ಸ್ಥಾಪಿಸಿದ, ಪೂಜಿಸಿದ ದೇವತೆಗಳನ್ನು ಅಷ್ಟೇ ಆದರ ಶ್ರದ್ಧೆ ವಿಶ್ವಾಸಗಳಿಂದ ಪುನಃ ಪೂಜಿಸಿ ವಿಸರ್ಜನೆ ಮಾಡಬೇಕು. ನಂತರ ಬ್ರಾಹ್ಮಣರಿಗೆ ದಕ್ಷಿಣಾದಿಗಳನ್ನು ಕೊಟ್ಟು ಆಶೀರ್ವಾದ ಪಡೆಯಬೇಕು.

೩೨) **ಪುರೋಹಿತರಿಗೆ ದಕ್ಷಿಣೆ :** ಧಾರ್ಮಿಕ ವಿಧಿಗಳು ದಕ್ಷಿಣೆಯಿಲ್ಲದೇ ಪೂರ್ಣವಾಗಲಾರವು. ಕಾರಣ "ವಿವಾಹವಿಧಿ"ಯನ್ನು ಸಾಂಗವಾಗಿ ನೆರವೇರಿಸಿಕೊಡುವ ಪುರೋಹಿತರಿಗೆ ಯಥಾಶಕ್ತಿ (ತನ್ನ ಐಶ್ವರ್ಯಕ್ಕನುಗುಣವಾಗಿ) ಯೋಗ್ಯ ದಕ್ಷಿಣೆಯನ್ನು ಕೊಡುವದು ಅತ್ಯವಶ್ಯವಾಗಿದೆ. ವಿವಾಹ ಸಂಸ್ಕಾರ ಮಾಡಿಸಿದ ಪುರೋಹಿತನಿಗೆ ಅತಿ ಕಡಿಮೆಯೆಂದರೆ ಒಂದು ಆಕಳು ಅಥವಾ ಅದಕ್ಕೆ ತಗಲುವಷ್ಟು ದ್ರವ್ಯವನ್ನು ದಕ್ಷಿಣೆ ಕೊಡಬೇಕೆಂದು "ಗೃಹ್ಯಸೂತ್ರ"ಗಳಲ್ಲಿ ಹೇಳಲಾಗಿದೆ.

ವಿವಾಹದ ನಂತರ ಮೊದಲು ಬರುವ ಆಷಾಢಮಾಸದಲ್ಲಿ ಅತ್ತೆಯ ಮನೆಯಲ್ಲಿ ವಧು ಇದ್ದರೆ ಅತ್ತೆಗೆ ತೊಂದರೆ ಕ್ಷಯಮಾಸದಲ್ಲಿ ಸ್ವಂತಕ್ಕೆ ತೊಂದರೆ, ಜ್ಯೇಷ್ಠಮಾಸದಲ್ಲಿ ಗಂಡನ ಹಿರಿಯಣ್ಣನಿಗೆ ತೊಂದರೆ (ಭಾವನಿಗೆ), ಪುಷ್ಯಮಾಸದಲ್ಲಿ ಮಾವನಿಗೆ ತೊಂದರೆ, ಅಧಿಕಮಾಸದಲ್ಲಿ ಗಂಡನಿಗೆ ತೊಂದರೆ, ಚೈತ್ರಮಾಸದಲ್ಲಿ ತನ್ನ ತಂದೆಯ ಮನೆಯಲ್ಲಿ ಇದ್ದರೆ ತಂದೆಗೆ ತೊಂದರೆ, ಇಲ್ಲಿ ಯಾರಿಗೆ ತೊಂದರೆ ಎಂದು ಹೇಳಲಾಗಿದೆಯೋ ಅವರು ಇಲ್ಲದಿದ್ದರೆ ಭಯವಿಲ್ಲ ಎಂದು ತಿಳಿಯಬೇಕು.



---

೩೦) ಓಂ ಇಹ ಪ್ರಿಯಂ ಪ್ರಜಯಾ ತೇ ಸಮೃಧ್ಯತಾಮಸ್ಮಿನ್ ಗೃಹೇ ಗಾರ್ಹಪತ್ಯಾಯ ಜಾಗೃಹಿ । ಏನಾಪತ್ಯಾತನ್ವಂ ಸಂಸೃಜ ಸ್ವಾಧಾಜಿವ್ರೀವಿದಥ ಮಾವದಾರ್ಥಃ ॥

# ವಿವಾಹವು ಅಗ್ನಿಸಾಕ್ಷಿಕ ಏಕೆ ?

ಕನ್ಯೆಯು ಹುಟ್ಟಿದ ನಂತರ ಅವಳು ರಜಸ್ವಲೆಯಾಗಿ ಸಂತಾನೋತ್ಪತ್ತಿಗೆ ಸಿದ್ಧವಾಗಬೇಕಾದರೆ ಅದಕ್ಕೆ ಬೇಕಾದ ಶಾರೀರಿಕ ಮಾನಸಿಕ ಬದಲಾವಣೆಗಳನ್ನು ಅವಳಲ್ಲಿ ಮೂರು ಜನ ದೇವತೆಗಳು ಉಂಟುಮಾಡುತ್ತಾರೆ. ಸೋಮ (ಚಂದ್ರ), ಗಂಧರ್ವ, ಅಗ್ನಿಗಳೇ ಆ ಮೂರು ಜನ ದೇವತೆಗಳಾಗಿದ್ದಾರೆ.

ಸಾಮಾನ್ಯವಾಗಿ ಏಳು ವರ್ಷಗಳವರೆಗೆ ಚಂದ್ರನು ಕನ್ಯೆಯ ಶರೀರದಲ್ಲಿದ್ದು ಅವಳಲ್ಲಿ ಸ್ತ್ರೀಸಹಜವಾದ ಕೋಮಲತೆ, ಸಹನಶೀಲತೆ, ಮತ್ತು ಮಾನಸಿಕ ವಿಕಾಸವನ್ನು ಉಂಟುಮಾಡುತ್ತಾನೆ. ನಂತರ ಅವಳ ದೇಹದ ವಿಕಾಸಕ್ಕಾಗಿ ಅವಳನ್ನು ಗಂಧರ್ವನಿಗೆ ಒಪ್ಪಿಸುತ್ತಾನೆ. ಏಳನೆ ವಯಸ್ಸಿನಿಂದ ೧೨-೧೩ ವಯಸ್ಸುಗಳವರೆಗೆ (ಕಿಶೋರಿ) ಕನ್ಯೆಯಲ್ಲಾಗುವ ಶಾರೀರಿಕ ಬದಲಾವಣೆಗಳನ್ನು ಗಂಧರ್ವನು ಮಾಡುತ್ತಾನೆ. ಅವಳು ರಜಸ್ವಲೆಯಾಗಲು ಬೇಕಾದ ಎಲ್ಲ ಸಿದ್ಧತೆಗಳನ್ನು ಮಾಡಿ ಅವನು ಅವಳನ್ನು ಅಗ್ನಿಗೆ ಒಪ್ಪಿಸುತ್ತಾನೆ. ಅಂದಿನಿಂದ ಆ ಕನ್ಯೆಯಲ್ಲಿರುವ ಎಲ್ಲ ಶಾರೀರಿಕ, ಮಾನಸಿಕ ವಿಕಾಸಗಳಿಗೆ ಅಗ್ನಿಯೇ ಹೊಣೆಯಾಗಿರುತ್ತಾನೆ.

ಕನ್ಯೆಯ ವಿವಾಹಯೋಗ್ಯ ವಯಸ್ಸಿನಲ್ಲಿ ತಂದೆತಾಯಿಗಳ ಜೊತೆಗೆ ಅಗ್ನಿಯೂ ಜವಾಬುದಾರನಾಗಿ, ವರನಿಗೆ ತಂದೆತಾಯಿಗಳು ಒಪ್ಪಿಸಿಕೊಡುವಂತೆ ಅಗ್ನಿಯೂ ಒಪ್ಪಿಸಿಕೊಡುತ್ತಾನೆ. ಈ ಮೂವರು ಸೇರಿ ಕನ್ಯೆಯನ್ನು ಒಪ್ಪಿಸಿಕೊಡುವ ವಿಧಾನವೇ ಶಾಸ್ತ್ರೋಕ್ತ 'ವಿವಾಹವಿಧಿ' ಎಂದೆನಿಸುತ್ತದೆ.

ಮೊದಲು ಚಂದ್ರ, ನಂತರ ಗಂಧರ್ವ, ನಂತರ ಅಗ್ನಿಯು ತರುವಾಯ ನಾಲ್ಕನೆಯವನಾದ 'ವರ'ನು ಕನ್ಯೆಯನ್ನು ಸ್ವೀಕರಿಸುತ್ತಾನೆ.[೧]

ಬೋಧಾಯನ ಗೃಹ್ಯಸೂತ್ರವು ಇದನ್ನು ಹೀಗೆ ವಿವರಿಸಿದೆ–

ಸೋಮ (ಚಂದ್ರನು) ಕನ್ಯೆಗೆ ಶುದ್ಧಿಯನ್ನು ಕೊಡುವನು. ಗಂಧರ್ವನು ಅವಳಿಗೆ ಇಂಪಾದ ಧ್ವನಿಯನ್ನು, ಮಾತುಗಾರಿಕೆಯನ್ನು ಕೊಡುವನು. ಅಗ್ನಿಯು ಅವಳನ್ನು ಎಲ್ಲ ರೀತಿಯಿಂದಲೂ ಯಜ್ಞಕ್ಕೆ ಅರ್ಹಳಾಗುವಂತೆ ಮಾಡುವನು.

---

೧) ಸೋಮಃ ಪ್ರಥಮೋ ವಿವಿದೆ ಗಂಧರ್ವೋ ವಿವಿದ ಉತ್ತರಃ ।
ತೃತೀಯೋಽಗ್ನಿಷ್ಟೇ ಪತಿಸ್ತುರೀಯಸ್ತೇ ಮನುಷ್ಯಜಾಃ ॥ ಋಗ್ವೇದ (೧೦-೮೫-೪೦)

ಜನರಿಂದ ಹೊಗಳಿಸಿಕೊಳ್ಳೋಣ"[೩೦] ಎಂದು ಹೇಳಿ ಆಚಾರ ಪ್ರಾಪ್ತವಾದ ಲಕ್ಷ್ಮೀ ಪೂಜೆಯನ್ನು ಮಾಡಬೇಕು.

೩೧) **ದೇವತೋತ್ಥಾಪನ - ಮಂಡಪೋದ್ವಾಸನ :** ವಿವಾಹದ ಆರಂಭದಲ್ಲಿ ಆವಾಹಿಸಿ ಸ್ಥಾಪಿಸಿದ, ಪೂಜಿಸಿದ ದೇವತೆಗಳನ್ನು ಅಷ್ಟೇ ಆದರ ಶ್ರದ್ಧೆ ವಿಶ್ವಾಸಗಳಿಂದ ಪುನಃ ಪೂಜಿಸಿ ವಿಸರ್ಜನೆ ಮಾಡಬೇಕು. ನಂತರ ಬ್ರಾಹ್ಮಣರಿಗೆ ದಕ್ಷಿಣಾದಿಗಳನ್ನು ಕೊಟ್ಟು ಆಶೀರ್ವಾದ ಪಡೆಯಬೇಕು.

೩೨) **ಪುರೋಹಿತರಿಗೆ ದಕ್ಷಿಣೆ :** ಧಾರ್ಮಿಕ ವಿಧಿಗಳು ದಕ್ಷಿಣೆಯಿಲ್ಲದೇ ಪೂರ್ಣವಾಗಲಾರವು. ಕಾರಣ "ವಿವಾಹವಿಧಿ"ಯನ್ನು ಸಾಂಗವಾಗಿ ನೆರವೇರಿಸಿಕೊಡುವ ಪುರೋಹಿತರಿಗೆ ಯಥಾಶಕ್ತಿ (ತನ್ನ ಐಶ್ವರ್ಯಕ್ಕನುಗುಣವಾಗಿ) ಯೋಗ್ಯ ದಕ್ಷಿಣೆಯನ್ನು ಕೊಡುವದು ಅತ್ಯವಶ್ಯವಾಗಿದೆ. ವಿವಾಹ ಸಂಸ್ಕಾರ ಮಾಡಿಸಿದ ಪುರೋಹಿತನಿಗೆ ಅತಿ ಕಡಿಮೆಯೆಂದರೆ ಒಂದು ಆಕಳು ಅಥವಾ ಅದಕ್ಕೆ ತಗಲುವಷ್ಟು ದ್ರವ್ಯವನ್ನು ದಕ್ಷಿಣೆ ಕೊಡಬೇಕೆಂದು "ಗೃಹ್ಯಸೂತ್ರ"ಗಳಲ್ಲಿ ಹೇಳಲಾಗಿದೆ.

ವಿವಾಹದ ನಂತರ ಮೊದಲು ಬರುವ ಆಷಾಢಮಾಸದಲ್ಲಿ ಅತ್ತೆಯ ಮನೆಯಲ್ಲಿ ವಧು ಇದ್ದರೆ ಅತ್ತೆಗೆ ತೊಂದರೆ ಕ್ಷಯಮಾಸದಲ್ಲಿ ಸ್ವಂತಕ್ಕೆ ತೊಂದರೆ, ಜ್ಯೇಷ್ಠ ಮಾಸದಲ್ಲಿ ಗಂಡನ ಹಿರಿಯಣ್ಣನಿಗೆ ತೊಂದರೆ (ಭಾವನಿಗೆ), ಪುಷ್ಯಮಾಸದಲ್ಲಿ ಮಾವನಿಗೆ ತೊಂದರೆ, ಅಧಿಕಮಾಸದಲ್ಲಿ ಗಂಡನಿಗೆ ತೊಂದರೆ, ಚೈತ್ರಮಾಸದಲ್ಲಿ ತನ್ನ ತಂದೆಯ ಮನೆಯಲ್ಲಿ ಇದ್ದರೆ ತಂದೆಗೆ ತೊಂದರೆ, ಇಲ್ಲಿ ಯಾರಿಗೆ ತೊಂದರೆ ಎಂದು ಹೇಳಲಾಗಿದೆಯೋ ಅವರು ಇಲ್ಲದಿದ್ದರೆ ಭಯವಿಲ್ಲ ಎಂದು ತಿಳಿಯಬೇಕು.

– ⊙ –

---

೩೦) ಓಂ ಇಹ ಪ್ರಿಯಂ ಪ್ರಜಯಾ ತೇ ಸಮೃಧ್ಯತಾಮಸ್ಮಿನ್ ಗೃಹೇ ಗಾರ್ಹಪತ್ಯಾಯ ಜಾಗೃಹಿ । ಏನಾಪತ್ಯಾತನ್ವಂ ಸಂಸೃಜ ಸ್ವಾಧಾಜಿವ್ರೀವಿದಥ ಮಾವದಾರ್ಥಃ ॥

# ವಿವಾಹವು ಅಗ್ನಿಸಾಕ್ಷಿಕ ಏಕೆ ?

ಕನ್ಯೆಯು ಹುಟ್ಟಿದ ನಂತರ ಅವಳು ರಜಸ್ವಲೆಯಾಗಿ ಸಂತಾನೋತ್ಪತ್ತಿಗೆ ಸಿದ್ಧವಾಗಬೇಕಾದರೆ ಅದಕ್ಕೆ ಬೇಕಾದ ಶಾರೀರಿಕ ಮಾನಸಿಕ ಬದಲಾವಣೆಗಳನ್ನು ಅವಳಲ್ಲಿ ಮೂರು ಜನ ದೇವತೆಗಳು ಉಂಟುಮಾಡುತ್ತಾರೆ. ಸೋಮ (ಚಂದ್ರ), ಗಂಧರ್ವ, ಅಗ್ನಿಗಳೇ ಆ ಮೂರು ಜನ ದೇವತೆಗಳಾಗಿದ್ದಾರೆ.

ಸಾಮಾನ್ಯವಾಗಿ ಏಳು ವರ್ಷಗಳವರೆಗೆ ಚಂದ್ರನು ಕನ್ಯೆಯ ಶರೀರದಲ್ಲಿದ್ದು ಅವಳಲ್ಲಿ ಸ್ತ್ರೀಸಹಜವಾದ ಕೋಮಲತೆ, ಸಹನಶೀಲತೆ, ಮತ್ತು ಮಾನಸಿಕ ವಿಕಾಸವನ್ನು ಉಂಟುಮಾಡುತ್ತಾನೆ. ನಂತರ ಅವಳ ದೇಹದ ವಿಕಾಸಕ್ಕಾಗಿ ಅವಳನ್ನು ಗಂಧರ್ವನಿಗೆ ಒಪ್ಪಿಸುತ್ತಾನೆ. ಏಳನೆ ವಯಸ್ಸಿನಿಂದ ೧೨-೧೩ ವಯಸ್ಸುಗಳವರೆಗೆ (ಕಿಶೋರಿ) ಕನ್ಯೆಯಲ್ಲಾಗುವ ಶಾರೀರಿಕ ಬದಲಾವಣೆಗಳನ್ನು ಗಂಧರ್ವನು ಮಾಡುತ್ತಾನೆ. ಅವಳು ರಜಸ್ವಲೆಯಾಗಲು ಬೇಕಾದ ಎಲ್ಲ ಸಿದ್ಧತೆಗಳನ್ನು ಮಾಡಿ ಅವನು ಅವಳನ್ನು ಅಗ್ನಿಗೆ ಒಪ್ಪಿಸುತ್ತಾನೆ. ಅಂದಿನಿಂದ ಆ ಕನ್ಯೆಯಲ್ಲಿರುವ ಎಲ್ಲ ಶಾರೀರಿಕ, ಮಾನಸಿಕ ವಿಕಾಸಗಳಿಗೆ ಅಗ್ನಿಯೇ ಹೊಣೆಯಾಗಿರುತ್ತಾನೆ.

ಕನ್ಯೆಯ ವಿವಾಹಯೋಗ್ಯ ವಯಸ್ಸಿನಲ್ಲಿ ತಂದೆತಾಯಿಗಳ ಜೊತೆಗೆ ಅಗ್ನಿಯೂ ಜವಾಬುದಾರನಾಗಿ, ವರನಿಗೆ ತಂದೆತಾಯಿಗಳು ಒಪ್ಪಿಸಿಕೊಡುವಂತೆ ಅಗ್ನಿಯೂ ಒಪ್ಪಿಸಿಕೊಡುತ್ತಾನೆ. ಈ ಮೂವರು ಸೇರಿ ಕನ್ಯೆಯನ್ನು ಒಪ್ಪಿಸಿಕೊಡುವ ವಿಧಾನವೇ ಶಾಸ್ತ್ರೋಕ್ತ 'ವಿವಾಹವಿಧಿ' ಎಂದೆನಿಸುತ್ತದೆ.

ಮೊದಲು ಚಂದ್ರ, ನಂತರ ಗಂಧರ್ವ, ನಂತರ ಅಗ್ನಿಯು ತರುವಾಯ ನಾಲ್ಕನೆಯವನಾದ 'ವರ'ನು ಕನ್ಯೆಯನ್ನು ಸ್ವೀಕರಿಸುತ್ತಾನೆ.[೧]

ಬೋಧಾಯನ ಗೃಹ್ಯಸೂತ್ರವು ಇದನ್ನು ಹೀಗೆ ವಿವರಿಸಿದೆ–

ಸೋಮ (ಚಂದ್ರನು) ಕನ್ಯೆಗೆ ಶುದ್ಧಿಯನ್ನು ಕೊಡುವನು. ಗಂಧರ್ವನು ಅವಳಿಗೆ ಇಂಪಾದ ಧ್ವನಿಯನ್ನು, ಮಾತುಗಾರಿಕೆಯನ್ನು ಕೊಡುವನು. ಅಗ್ನಿಯು ಅವಳನ್ನು ಎಲ್ಲ ರೀತಿಯಿಂದಲೂ ಯಜ್ಞಕ್ಕೆ ಅರ್ಹಳಾಗುವಂತೆ ಮಾಡುವನು.

---

೧) ಸೋಮಃ ಪ್ರಥಮೋ ವಿವಿದೆ ಗಂಧರ್ವೋ ವಿವಿದ ಉತ್ತರಃ ।
ತೃತೀಯೋऽಗ್ನಿಷ್ಟೇ ಪತಿಸ್ತುರೀಯಸ್ತೇ ಮನುಷ್ಯಜಾಃ ॥ ಋಗ್ವೇದ (೧೦-೮೫-೪೦)

ಸೋಮನು (ಚಂದ್ರನು) ವೈದಿಕ ಪರಿಭಾಷೆಯಲ್ಲಿ ಸಸ್ಯಗಳಿಗೆ ಮತ್ತು ಮನಸ್ಸಿಗೆ ಅಧಿಪತಿ. ಕನ್ಯೆಯ ಶರೀರ ಮತ್ತು ಮನಸ್ಸುಗಳನ್ನು ಅವನು ಶುದ್ಧ ಮಾಡುತ್ತಾನೆ. ಮತ್ತು ಗಂಧರ್ವನಿಗೆ ಅವಳನ್ನು ಕೊಡುತ್ತಾನೆ. ಗಂಧರ್ವನು ಸಂಗೀತಕ್ಕೂ ಹಾವಭಾವ ವಿಲಾಸಗಳಿಗೂ ಅಧಿದೇವತೆಯಾದ್ದರಿಂದ ಕನ್ಯೆಯಲ್ಲಿ ಇಂಪಾದ ಧ್ವನಿ, ನಾಚಿಕೆ, ಶಾರೀರಿಕ ಬದಲಾವಣೆ ಉಂಟುಮಾಡಿ ಅವಳನ್ನು ಅಗ್ನಿಗೆ ಕೊಡುತ್ತಾನೆ. ಅಗ್ನಿಯು ಕನ್ಯೆಯಲ್ಲಿ ಸ್ತ್ರೀತ್ವವನ್ನು ಪರಿಪೂರ್ಣಗೊಳಿಸಿ ಸಂತಾನೋತ್ಪಾದನೆಗೆ ಸಿದ್ಧಗೊಳಿಸಿ, ಅವಳು ಯಜ್ಞಕ್ಕೆ ಯೋಗ್ಯಳಾಗುವಂತೆ ಮಾಡಿ ಅವಳನ್ನು ಮನುಷ್ಯನಿಗೆ ಅನುಗ್ರಹಿಸುತ್ತಾನೆ.

ಈ ಕಾರಣದಿಂದ ವರನು ಹೀಗೆ ಹೇಳುತ್ತಾನೆ–

ಚಂದ್ರನು ಇವಳನ್ನು ಗಂಧರ್ವನಿಗೆ ಕೊಟ್ಟನು. ಗಂಧರ್ವನು ಅಗ್ನಿಗೆ ಕೊಟ್ಟನು. ಅಗ್ನಿಯು ವಿಕಸಿತ ಶರೀರ, ಹಾಗೂ ಮಾನಸಿಕ ಸಂಪತ್ತು ಪ್ರಜನ ಶಕ್ತಿಯಿಂದ ಸಂಪನ್ನಳಾದ ಇವಳನ್ನು ನನಗೆ ಕೊಡಲಿ.[೨]

ಆದ್ದರಿಂದ ಅಗ್ನಿಸಾಕ್ಷಿಯಾಗಿ ಈ ವಿವಾಹವು ನಡೆದದ್ದಾದರೆ ತಂದೆ, ತಾಯಿ, ಅಗ್ನಿ ಮೂವರೂ ಕನ್ಯೆಯನ್ನು ವರನಿಗೆ ಒಪ್ಪಿಸಿದಂತೆ ಆಗುತ್ತದೆ. ಇಂಥ ವಿವಾಹ ಸಂಬಂಧವೇ ನೈಜ ಸಂಬಂಧವೆನಿಸುತ್ತದೆ. ಅದರಿಂದಾಗಿಯೇ 'ಪಾಣಿಗ್ರಹಣ'ವು ಅಗ್ನಿಯ ಸಮ್ಮುಖದಲ್ಲಿ ನೆರವೇರುತ್ತದೆ.

– ⊙ –

---

೨) ಸೋಮೋಽದದದ್ಗಂಧರ್ವಾಯ ಗಂಧರ್ವೋಽದದದಗ್ನಯೇ ।
ರಯಿಂ ಚ ಪುತ್ರಾಂಶ್ಚಾದಾದಗ್ನಿರ್ಮಹ್ಯಮಥೋ ಇಮಾಮ್ ॥ ಋಗ್ವೇದ
(೧೦-೮೫-೪೧)

# ಸುಮಂಗಲಿಯರು ಧರಿಸಲೇಬೇಕಾದ ಹತ್ತು ವಸ್ತುಗಳು

ಮದುವೆಯಾದ ನಂತರ ಕನ್ಯೆಯು ಸೌಭಾಗ್ಯವತೀ, ಸುವಾಸಿನೀ, ಸುಮಂಗಲೀ ಸ್ತ್ರೀ ಎಂದು ಕರೆಯುಲ್ಪಡುತ್ತಾಳೆ. ಈ ಸುಮಂಗಲೀ ಸ್ತ್ರೀಯು ನಿತ್ಯದಲ್ಲಿ ಹತ್ತು ಮಂಗಲದ್ರವ್ಯಗಳನ್ನು ಧರಿಸಿರಲೇಬೇಕು. ಅವುಗಳ ಪರಿಚಯ ಇಲ್ಲಿದೆ. ಅರಿಷಿಣ, ಕುಂಕುಮ, ಸಿಂಧೂರ, ಕಾಡಿಗೆ, ಕುಪ್ಪುಸ, ಮಂಗಳಸೂತ್ರ, ಬಳೆ, ಕಿವಿಓಲೆ (ಬೆಂಡೋಲೆ), ತಾಂಬೂಲ (ಪತಿ ಊರಲ್ಲಿದ್ದಾಗ ಮಾತ್ರ), ಕೇಶ ಶೃಂಗಾರ. ಇವು ಹತ್ತು ಮಂಗಳದ್ರವ್ಯಗಳೆಂದು ಶ್ರೀ ಸ್ಕಂದ ಮಹಾಪುರಾಣದಲ್ಲಿ ತಿಳಿಸಿದ್ದಾರೆ.*

೧) **ಅರಿಷಿಣ :** ಇದು ಪರಮ ಮಂಗಳದ್ರವ್ಯವಾಗಿದೆ. ಇದಕ್ಕೆ 'ಹರಿದ್ರಾಚೂರ್ಣ' ವೆಂದೂ ಕರೆಯುವದುಂಟು. ಇದನ್ನು ಪತಿಯಾದವನು ಗಾಯತ್ರೀ, ಮೂಲಮಂತ್ರಗಳಿಂದ ಅಭಿಮಂತ್ರಿಸಿ ನಂತರ ಶ್ರೀಹರಿಸಮೇತ ಲಕ್ಷ್ಮೀದೇವಿಯರಿಗೆ ಅರ್ಪಿಸಿ, ನಂತರ ತುಳಸಿ, ಗೌರಿಯರಿಗೆ ಅರ್ಪಿಸಿ ಅದನ್ನು ಮೂರು ಭಾಗ ಮಾಡಬೇಕು. ೧) ದಿನದಲ್ಲಿ ಪತಿಯಿಂದ ಕೈಗೆ ತೆಗೆದುಕೊಂಡು ಹಚ್ಚಿಕೊಳ್ಳುವುದಕ್ಕೆ, ೨) ತಾನು ಹಚ್ಚಿಕೊಳ್ಳುವುದಕ್ಕೆ, ೩) ಬಂದ ಬ್ರಾಹ್ಮಣ ಸ್ತ್ರೀಯರಿಗೆ ಕೊಡುವುದಕ್ಕೆ ಇಟ್ಟುಕೊಳ್ಳಬೇಕು. ತಾನು ನಿತ್ಯದಲ್ಲಿ ಎರಡು ಕಪೋಲಗಳಿಗೆ, ಎರಡು ಮೊಣಕೈಗಳಿಗೆ, ಮಂಡಿಯಿಂದ ಅಂಗಾಲಿನವರೆಗೆ ಹಚ್ಚಿಕೊಳ್ಳಬೇಕು. ಹೀಗೆ ಹಚ್ಚಿಕೊಳ್ಳುವಾಗ ಪತ್ಯಂತರ್ಗತ ಶ್ರೀಹರಿಯನ್ನು ನೆನೆಯಬೇಕು. ಅರಿಷಿಣ ಕುಂಕುಮಗಳನ್ನು ಮೊದಲು ತಾಳಿಗೆ ಲೇಪಿಸಿಕೊಂಡು ನಂತರ ಸ್ವತಃ ಹಚ್ಚಿಕೊಳ್ಳುವ ಪದ್ಧತಿಯೂ ಕೆಲವರಲ್ಲಿದೆ. ಇದರಲ್ಲಿ ನಿತ್ಯದೇವತಾ ಸನ್ನಿಧಾನ ಇರುತ್ತದೆ.

೨) **ಕುಂಕುಮ :** ಕುಂಕುಮದಲ್ಲಿ ನಿತ್ಯ ರಮಾಸನ್ನಿಧಾನವಿರುತ್ತದೆ. ಪೂರ್ವಕಾಲದಲ್ಲಿ ಅರಿಷಿಣವನ್ನು ಕುಟ್ಟಿ ಪುಡಿಮಾಡಿ ಅದಕ್ಕೆ ಸುಣ್ಣವನ್ನು ಸಾಕಷ್ಟು ಪ್ರಮಾಣದಲ್ಲಿ ಸೇರಿಸಿ ಶಾಸ್ತ್ರೋಕ್ತ ಕುಂಕುಮವನ್ನು ತಯಾರಿಸುತ್ತಿದ್ದರು. ಇದೇ ನಿಜವಾದ ಕುಂಕುಮ. ಇರಲಿ ಈಗ ಅಂಗಡಿಯಲ್ಲಿ ಸಿಕ್ಕುವ ಕುಂಕುಮವನ್ನು ತಂದು ಹಾಗೆಯೇ ಹಚ್ಚಿಕೊಳ್ಳಬಾರದು.

---

* ಹರಿದ್ರಾಂ ಕುಂಕುಮಂ ಚೈವ ಸಿಂಧೂರಂ ಕಜ್ಜಲಂ ತಥಾ ।
ಕೂರ್ಪಾಸಕಂ ಚ ತಾಂಬೂಲಂ ಮಾಂಗಲ್ಯಾಭರಣಂ ಶುಭಮ್ ॥
ಕೇಶ ಸಂಸ್ಕಾರಕಂ ಚೈವ ಕರಕರ್ಣಾದಿ ಭೂಷಣಮ್ ।
ಭರ್ತುರಾಯುಷ್ಯಮಿಚ್ಛಂತೀ ದೂರಯೇನ್ನ ಪತಿವ್ರತಾ ॥ ಶ್ರೀಸ್ಕಂದಮಹಾಪುರಾಣ
(ಧರ್ಮಾರಣ್ಯಮಹಾತ್ಮ್ಯ)

ಅದನ್ನು ತಂದಮೇಲೆ ಪತಿಯು ಗಾಯತ್ರೀ, ಮೂಲಮಂತ್ರಗಳಿಂದ ಅಭಿಮಂತ್ರಿಸಿ ನಂತರ ಶ್ರೀಹರಿಸಮೇತ ಲಕ್ಷ್ಮೀದೇವಿಗೆ ಅರ್ಪಿಸಿ ಪತ್ನಿಗೆ ಕೊಡಬೇಕು. ಅವಳು ಅದನ್ನು ತುಳಸಿಗೆ, ಗೌರಿಗೆ ಅರ್ಪಿಸಿದ ನಂತರ ಮೇಲೆ ತಿಳಿಸಿದಂತೆ ಮೂರು ಭಾಗ ಮಾಡಿಇಟ್ಟುಕೊಂಡು ಉಪಯೋಗಿಸಬೇಕು. ಮತ್ತೊಬ್ಬರು ಹಚ್ಚಿಕೊಂಡ ಕುಂಕುಮವನ್ನು ಧಾರಣೆ ಮಾಡಬಾರದು. (ಮದುವೆಯಾಗದವರು ಗುಂಡು (ವರ್ತುಲ) ಆಕೃತಿಯಾಗಿಯೂ), ಮದುವೆಯಾದವರು ಊರ್ಧ್ವವಾಗಿಯೂ ಧರಿಸಬೇಕು. ಕುಂಕುಮವು ಎಷ್ಟು ಊರ್ಧ್ವವಾಗಿರುವುದೋ ಅಷ್ಟು ಪತಿಯ ಆಯುಷ್ಯವು ವೃದ್ಧಿಯಾಗುತ್ತದೆ. ಮೊದಲು ಗದಿ ಹಚ್ಚಿಕೊಂಡು ನಂತರ ಮೇಣಹಚ್ಚಿಕೊಂಡು ಕುಂಕುಮ ಧಾರಣೆ ಮಾಡಬೇಕು. ಹೀಗೆ ಧರಿಸುವಾಗ ಪತ್ಯಂತರ್ಗತ ಶ್ರೀಹರಿಯನ್ನು ಸ್ಮರಿಸುತ್ತಿರಬೇಕು. ಹೀಗೆ ಧರಿಸುವುದರಿಂದ ಅಖಂಡ ಸೌಭಾಗ್ಯಪ್ರಾಪ್ತಿಯಾಗುತ್ತದೆ. ಯಾವ ಕಾಲದಲ್ಲಿಯೂ 'ಟಿಕಳಿ' ಕುಂಕುಮ ಬೊಟ್ಟು ಧರಿಸಬಾರದು. ಇದನ್ನು ಧರಿಸುವದು ಅಶಾಸ್ತ್ರೀಯ.

೩) **ಸಿಂಧೂರ :** ಇದು ಕೆಂಪುಬಣ್ಣದ ಚೂರ್ಣವಾಗಿದೆ. ಇದನ್ನು ಪ್ರತಿನಿತ್ಯ ಸುಮಂಗಲೀ ಸ್ತ್ರೀಯರು ಧರಿಸಬೇಕು.

೪) **ಕಾಡಿಗೆ (ಕಣ್ಣಿನ ಕಪ್ಪು) :** ಇದು ಸುಮಂಗಲಿಯರಿಗೆ ಬಹಳ ಮುಖ್ಯವಾದುದು. ಇದನ್ನು ಹಚ್ಚಿಕೊಳ್ಳುವುದರಿಂದ ಪರಪುರುಷರ ದೃಷ್ಟಿಗೋಚರಗಳ ಪಾಪ ಪರಿಹಾರವಾಗುತ್ತದೆ. ನಾವು ಶುದ್ಧ ಮನಸ್ಕರಾಗಿದ್ದರೂ ಪರಪುರುಷನು ನಮ್ಮನ್ನು ನೋಡಿ ವಿಕಾರಹೊಂದಿದರೆ ಆ ದೋಷವು ನಮ್ಮನ್ನು ಕಾಡಬಹುದು. ಈ ದೋಷವನ್ನು ಕಾಡಿಗೆ ಪರಿಹರಿಸುತ್ತದೆ. ಈ ಕಾಡಿಗೆಯನ್ನು ತಯಾರಿಸುವಾಗ ಲಕ್ಷ್ಮೀದೇವಿ, ಪಾರ್ವತೀದೇವಿಯರ ಸ್ತೋತ್ರ ಪಠಿಸುತ್ತ ತಯಾರಿಸಿಕೊಳ್ಳಬೇಕು.

೫) ಕುಪ್ಪುಸ : ಸುಮಂಗಲೀ ಸ್ತ್ರೀಯರು ನಿತ್ಯದಲ್ಲಿ ಕುಪ್ಪುಸವನ್ನು ತೊಟ್ಟುಕೊಳ್ಳದೇ ಯಾವ ಕಾರ್ಯಗಳನ್ನೂ ಮಾಡಬಾರದು. ಯಾವ ಕಾರಣಕ್ಕೂ ಕುಪ್ಪುಸವನ್ನು ಧರಿಸದೇ ಇರಬಾರದು. ಇದರಿಂದ ಪತಿಯ ಆಯುಷ್ಯ ಅಭಿವೃದ್ಧಿಯಾಗುವದೆಂದು ಹೇಳುತ್ತಾರೆ.

೬) **ಮಂಗಳಸೂತ್ರ :** ಇದು ಸರ್ವ ವಿಪತ್ತಿನಿಂದ ಪಾರುಮಾಡುವ, ಸಕಲ ಸಂಪತ್ಕರವಾದ, ತೀರ್ಥಗಳ, ದೇವತೆಗಳ ಸನ್ನಿಧಾನಕ್ಕೆ ಪಾತ್ರವಾದ ಮಂಗಲಕರ ಸೂತ್ರವೆಂದು ತಿಳಿಯಬೇಕು– ಇದರಲ್ಲಿ ಕರಿಮಣಿ, ಹವಳ ಇತ್ಯಾದಿಗಳು ಇರಲೇಬೇಕು. ಅಕಸ್ಮಾತ್ತಾಗಿ ವಿಚ್ಛೇದವಾದರೆ ಮತ್ತೆ ಅದನ್ನು ಪತಿಯಿಂದ ಅಥವಾ ಸುಮಂಗಲೀ ಸ್ತ್ರೀಯರಿಂದ ಕಟ್ಟಿಸಿಕೊಳ್ಳಬೇಕು.

೭) ಬಳೆ : ಸುಮಂಗಲಿ ಸ್ತ್ರೀಯರು ಬಳೆಗಳನ್ನು ನಿಯಮೇನ ಹಾಕಿಕೊಂಡೇ ಇರಬೇಕು. ಗಾಜಿನ ಬಳೆಗಳನ್ನು ಧರಿಸಬೇಕು. ಅನುಕೂಲವಿದ್ದರೆ ಬಂಗಾರದ ಬಳೆಗಳನ್ನು ಕೂಡ ಧರಿಸಬಹುದು. ಗಾಜಿನ ಬಳೆಗಳನ್ನು ಧರಿಸುವಾಗ ಅವುಗಳನ್ನು ಅಂಗಡಿಯಿಂದ ತಂದಮೇಲೆ ತೊಳೆದು ಶ್ರೀಸೂಕ್ತದಿಂದ ಅಭಿಮಂತ್ರಿಸಿ, ರಮಾದೇವಿಯರಿಗೆ, ತುಳಸೀ, ಗೌರಿಗೆ ಅರ್ಪಿಸಿ ತೊಟ್ಟುಕೊಳ್ಳಬೇಕು. ಇದು ಅವಶ್ಯ.

೮) **ಕಿವಿಓಲೆ (ಬೆಂಡೋಲೆ) :** ಇವು ಹರಳು ಅಥವಾ ಮುತ್ತುಗಳಿಂದ ಮಾಡಿದ್ದಾಗಿರಬೇಕು. ಅದರಲ್ಲಿಯೂ ಮುತ್ತಿನ ಓಲೆಗಳು ಪ್ರಶಸ್ತ್ಯವೆಂದು ತಿಳಿಯಬೇಕು. ಇವು ಅಷ್ಟದಳಾಕೃತಿಯಲ್ಲಿ ಇರಬೇಕು. 'ಓಲೆಭಾಗ್ಯ'ವೆಂದು ಗಾದೆ ಇದೆ. ಇದರಲ್ಲಿ ರಮಾದೇವಿಯರ ಸನ್ನಿಧಾನವಿರುತ್ತದೆ. ಆದ್ದರಿಂದ ಸೌಮಂಗಲ್ಯತ್ವ ಪ್ರಾಪ್ತಿಯಾಗುತ್ತದೆ.

೯) **ತಾಂಬೂಲ :** ಪ್ರತಿನಿತ್ಯ ಶ್ರೀಹರಿಗೆ ಅರ್ಪಿತವಾದ ತಾಂಬೂಲವನ್ನು, ಪತಿಗೆ ಕೊಟ್ಟು ತಾನು ಸ್ವೀಕರಿಸಬೇಕು. ಪತಿಯು ಊರಲ್ಲಿಲ್ಲದ ವೇಳೆಯಲ್ಲಿ ತಾನು ಸ್ವೀಕರಿಸಬಾರದು.

೧೦) **ಕೇಶ ಶೃಂಗಾರ :** ನಿತ್ಯದಲ್ಲಿ ಪ್ರಾತಃಕಾಲದಲ್ಲಿ ಕೇಶ ಶೃಂಗಾರ ಮಾಡಿಕೊಂಡೇ ಮೈತೊಳೆದುಕೊಳ್ಳಬೇಕು. ಕೇಶ ಪಾಶಗಳನ್ನು ಬಿಚ್ಚಿಕೊಂಡಿರಬಾರದು. ಸ್ತ್ರೀಯರ ಬೈತಲೆಯಲ್ಲಿ ಗಂಗಾಸಾನಿಧ್ಯವಿರುವದರಿಂದ ಅವರು ಶುದ್ಧರೆಂದೇ ಗಣನೆ. ಸೂರ್ಯಾಸ್ತದ ನಂತರ ಹೆರಳು ಹಾಕಿಕೊಳ್ಳಬಾರದೆಂಬ ನಿಯಮವಿದೆಯೆಂದು ಹಿರಿಯರು ಹೇಳುತ್ತಾರೆ. ಪತಿಯು ಊರಲ್ಲಿಲ್ಲದ ವೇಳೆಯಲ್ಲಿ ಹೆಚ್ಚಿನ ಶೃಂಗಾರಾದಿಗಳನ್ನು ಮಾಡಿಕೊಳ್ಳಬಾರದು ಎಂಬುದಾಗಿ ಶಾಸ್ತ್ರಕಾರರು ತಿಳಿಸುತ್ತಾರೆ.

ಇಲ್ಲಿ ಮೂಗುತಿ, ಕಾಲುಂಗರ, ಪಿಲ್ಲೆ ಇತ್ಯಾದಿಗಳನ್ನು ಪ್ರತ್ಯೇಕ ಹೇಳಿಲ್ಲವಾದ್ದರಿಂದ ಅವು ಸುಮಂಗಲೀ ಸ್ತ್ರೀಯರಿಗೆ ಅವಶ್ಯಕವಲ್ಲವೆಂದು ಯಾರೂ ಭಾವಿಸಬಾರದು. ಗ್ರಂಥಾಂತರಗಳಲ್ಲಿ ಅವುಗಳನ್ನು ಹೇಳಿರುತ್ತಾರೆ. ಕಾರಣ ಅವು ಕೂಡ ಅತೀ ಅವಶ್ಯವೆಂದೇ ತಿಳಿಯತಕ್ಕದ್ದು.

– ⊙ –

# ವಿವಾಹಿತ ಪುರುಷನ (ಗೃಹಸ್ಥಾಶ್ರಮಿಯ) ಕರ್ತವ್ಯಗಳು

ಗೃಹಸ್ಥಾಶ್ರಮ ಧರ್ಮವನ್ನು ಸ್ವೀಕರಿಸಿದ ಮಾನವನು ಜಗತ್ತನ್ನು ಪೋಷಣ ಮಾಡುತ್ತಾನೆ. ದೇವತೆಗಳು, ಪಿತೃಗಳು, ಮನುಷ್ಯರು, ಸಂನ್ಯಾಸಿಗಳು ಕ್ರಿಮಿಕೀಟಗಳು, ಪಶುಪಕ್ಷಿಗಳು ಎಲ್ಲರೂ ಗೃಹಸ್ಥಾಶ್ರಮಿಯನ್ನು ಅವಲಂಬಿಸಿರುತ್ತಾರೆ. ಇವರೆಲ್ಲರಿಗೂ ತೃಪ್ತಿ ಗೃಹಸ್ಥಾಶ್ರಮಿಯಿಂದಲೇ ಆಗುತ್ತದೆ.

ಬ್ರಾಹ್ಮಣನಾದವನು ಷಟ್ಕರ್ಮನಿರತನಾಗಿರಬೇಕು. ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ ಇವು ಆರು ಕರ್ಮಗಳು ಅವಶ್ಯ ಕರ್ತವ್ಯಗಳಾಗಿವೆ.[೧]

ಬ್ರಾಹ್ಮಣನು ನಿತ್ಯದಲ್ಲಿ ಋಷಿಯಜ್ಞ, ದೇವಯಜ್ಞ, ಭೂತಯಜ್ಞ, ಮನುಷ್ಯಯಜ್ಞ, ಮತ್ತು ಪಿತೃಯಜ್ಞಗಳನ್ನು ತಪ್ಪದೇ ಆಚರಿಸುತ್ತಿರಬೇಕು.[೨]

ಪಾಠ ಪ್ರವಚನಗಳು ಬ್ರಹ್ಮಯಜ್ಞ, ತರ್ಪಣಾದಿಗಳು ಪಿತೃಯಜ್ಞ, ವೈಶ್ವದೇವ ಹೋಮಾದಿ ಕಾರ್ಯಗಳು ದೇವಯಜ್ಞ, ಸರ್ವಪ್ರಾಣಿಗಳಿಗೂ ಅರ್ಪಿಸುವ ಬಲಿಯೇ ಭೂತಯಜ್ಞ ಮತ್ತು ಅತಿಥಿ ಸತ್ಕಾರಾದಿಗಳು ಮನುಷ್ಯಯಜ್ಞವೆನಿಸುತ್ತವೆ.[೩]

---

೧) ಅಧ್ಯಾಪನಮಧ್ಯಯನಂ ಯಜನಂ ಯಾಜನಂ ತಥಾ ।
ದಾನಂ ಪ್ರತಿಗ್ರಹಂ ಚೈವ ಬ್ರಾಹ್ಮಣಾನಾಮಕಲ್ಪಯತ್ ॥ ಮನಸ್ಮೃತಿ (೧-೭೫)
ಯಜನ = ಪೂಜೆ, ಯಾಜನ=ಪೂಜೆ ಮಾಡಿಸುವದು, ಅಧ್ಯಯನ=ಶಾಸ್ತ್ರ ಓದುವದು, ಅಧ್ಯಾಪನ=ಶಿಷ್ಯರಿಗೆ ಶಾಸ್ತ್ರಪಾಠ ಹೇಳುವದು, ದಾನ=ದಾನಕೊಡುವುದು, ಪ್ರತಿಗ್ರಹ=ದಾನಸ್ವೀಕರಿಸುವುದು.

೨) ಋಷಿಯಜ್ಞಂ ದೇವಯಜ್ಞಂ ಭೂತಯಜ್ಞಂ ಚ ಸರ್ವದಾ ।
ನೃಯಜ್ಞಂ ಪಿತೃಯಜ್ಞಂ ಚ ಯಥಾಶಕ್ತಿ ನ ಹಾಪಯೇತ್ ॥ ಮನುಸ್ಮೃತಿ (೪-೨೧)

೩) ಅಧ್ಯಾಪನಂ ಬ್ರಹ್ಮಯಜ್ಞಃ ಪಿತೃಯಜ್ಞಸ್ತು ತರ್ಪಣಮ್ ।
ಹೋಮೋ ದೈವೋ ಬಲಿರ್ಭೌತೋ ನೃಯಜ್ಞೋಽತಿಥಿಪೂಜನಮ್ ॥
ಮನುಸ್ಮೃತಿ - (೩-೭೦)
ಇವುಗಳನ್ನು ಅನುಬಂಧ ೧ ರಲ್ಲಿ ನೋಡಿಕೊಂಡು ನಿತ್ಯವೂ ಮಾಡಬೇಕು.

ಗೃಹಸ್ಥನು ತನ್ನ ವೈವಾಹಿಕ ಅಗ್ನಿಯಲ್ಲಿ ಪ್ರತಿದಿನ ಗೃಹ್ಯಕರ್ಮವನ್ನು ಅನುಷ್ಠಾನ ಮಾಡಬೇಕು. ಮೇಲೆ ಹೇಳಿದ ಪಂಚ ಮಹಾಯಜ್ಞಗಳನ್ನು ಆಚರಿಸುತ್ತಿರಬೇಕು. ಈ ಪ್ರಪಂಚದಲ್ಲಿ ಬದುಕಿ ಬಾಳುವ ಪ್ರತಿಯೊಬ್ಬ ಮಾನವನಿಂದ ಅನೇಕತರಹದ ಪ್ರಾಣಿಹಿಂಸೆಗಳು ಮಾಡಲ್ಪಡುತ್ತವೆ. ಕಣ್ಣಿಗೆ ಕಾಣದ ಅತಿ ಸೂಕ್ಷ್ಮಜಂತುಗಳು ಉಸಿರಾಡುವಾಗ, ನಡೆಯುವಾಗ, ಅಡಿಗೆ ಬೇಯಿಸುವಾಗ, ತರಕಾರಿ ಹೆಚ್ಚುವಾಗ, ಧಾನ್ಯ ಕುಟ್ಟುವಾಗ, ಕಸ ತೆಗೆಯುವಾಗ, ಕಾಲಿನಿಂದ ನಡೆಯುವಾಗ, ಸತ್ತುಹೋಗುವದರಿಂದ ನಮಗೆ ತಿಳಿಯದೇ ಪ್ರಾಣಿಹಿಂಸೆ ಏರ್ಪಡುತ್ತದೆ. ಈ ಅಜ್ಞಾತವಾದ ಪ್ರಾಣಿಹಿಂಸೆ ಪಾಪಗಳಿಗೆ 'ಪಂಚಸೂನಾ' ಎಂದು ಕರೆಯುತ್ತಾರೆ. ಈ ಪಂಚಸೂನಾ ದೋಷ ಪರಿಹಾರಕ್ಕಾಗಿ ಪ್ರಾಯಶ್ಚಿತ್ತವೆಂದು ವೈಶ್ವದೇವ, ಬಲಿಹರಣಗಳನ್ನು ಅವಶ್ಯವಾಗಿ ಮಾಡಬೇಕು. ಇವುಗಳನ್ನು ಮಾಡುವುದರಿಂದ ಸರ್ವತೋಮುಖ ಪುಣ್ಯವೃದ್ಧಿ ಹಾಗೂ ಕಲ್ಯಾಣವಾಗುತ್ತದೆ.

ಹೀಗೆ ದೇವತೆಗಳಿಗೆ ನೈವೇದ್ಯ, ಪಿತೃಗಳಿಗೆ, ತರ್ಪಣ, ಅತಿಥಿಗಳಿಗೆ ಅನ್ನ ಕೊಟ್ಟು ತಾನು ಭೋಜನ ಮಾಡುವವನು "ಅಮೃತಭೋಜಿ" ಎನಿಸುತ್ತಾನೆ. ಇವರೆಲ್ಲರನ್ನು ಬಿಟ್ಟು ತಾನೊಬ್ಬನೇ ಉಂಡು ಹೊಟ್ಟೆ ತುಂಬಿಸಿಕೊಳ್ಳುವವನು "ಪಾಪಭೋಜಿ" ಎನಿಸುತ್ತಾನೆ. ಶ್ರೀಮನ್ ಮಹಾಭಾರತದಲ್ಲಿ ದೇವತಾ, ಪಿತೃ, ಗುರು ಹಾಗೂ ಅತಿಥಿ ಇವರಿಗೆ ಕೊಟ್ಟು ಉಳಿದ ಅನ್ನವನ್ನು ಭೋಜನಮಾಡುವವನು "ವಿಘಸಾಶಿ" ಎಂದಿರುವುದು ಗಮನಾರ್ಹವಾಗಿದೆ. ಹಾಗೆಯೇ ಎಲ್ಲರಿಗೂ ಕೊಡದೇ ಉಣ್ಣುವವನು "ಕಳ್ಳ" ನೆನಿಸುತ್ತಾನೆ.[೪]

ಮತ್ತು ವೈಶ್ವದೇವವಿಲ್ಲದೇ ಊಟ ಮಾಡುವುದರಿಂದ ಬ್ರಾಹ್ಮಣನು ಜನ್ಮಾಂತರದಲ್ಲಿ ಕಾಗೆಯಾಗಿ ಹುಟ್ಟುತ್ತಾನೆ.



೪) ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ॥ ಗೀತಾ (೩-೧೨)

# ವಿವಾಹಿತ (ಪತಿವ್ರತಾ) ಸ್ತ್ರೀಯರ ಕರ್ತವ್ಯಗಳು

ಪತಿಯಲ್ಲಿ ನಿರತಿಶಯ ಪ್ರೀತಿ ಮಾಡುವ ಸತೀಮಣಿಯು ''ಪತಿವ್ರತೆ'' ಎನಿಸುವಳು. ಇಂಥ ಪತಿನಿಷ್ಠ ಮಹಿಳೆ ಇರುವ ಮನೆಯೇ ಪಾವನ. ಅಂಥ ಸತೀಮಣಿಯ ಕೈಹಿಡಿದ ಮಾನವ ಧನ್ಯ. ಇಂಥ ಪತಿವ್ರತಾ ಸ್ತ್ರೀಯರ ನೆರಳು ಕೂಡ ಪವಿತ್ರ. ಅವರ ಕಥೆ, ಸಮಾಚಾರ ಎಲ್ಲವೂ ಪುಣ್ಯದಾಯಕವೇ.

ಅರುಂಧತಿ, ಸಾವಿತ್ರೀ, ಅನಸೂಯಾ, ಶಾಂಡಿಲೀ, ಶತರೂಪಾ, ಸುನೀತಿ, ಸಂಜ್ಞಾ, ಸ್ವಾಹಾ, ಗೌರೀ, ಲಕ್ಷ್ಮೀ ಮುಂತಾದ ಮಹಿಳೆಯರಂತೆ ಪತಿವ್ರತಾ ಸ್ತ್ರೀಯು ಪೂಜ್ಯಳೇ ಆಗಿರುತ್ತಾಳೆ.

ಪತಿವ್ರತಾ ಸ್ತ್ರೀಯರು ಮುಖ್ಯವಾಗಿ ಪತಿಪ್ರಾಣರಾಗಿರಬೇಕು. ಪತಿಯ ಭೋಜನವಾಗುವವರೆಗೂ ತಾವು ಭೋಜನ ಮಾಡಬಾರದು. ಪತಿಯು ಎದ್ದುನಿಂತಾಗ ತಾವು ಕುಳಿತುಕೊಳ್ಳಬಾರದು. ಅವರು ಮಲಗುವದಕ್ಕಿಂತ ಮೊದಲು ಮಲಗಬಾರದು. ಅವನು ಏಳುವದಕ್ಕಿಂತ ಮೊದಲು ಎದ್ದು ಎಲ್ಲವನ್ನೂ ಅಣಿಗೊಳಿಸಬೇಕು.

ಗಂಡನು ಪರಊರಿಗೆ ಹೋದಾಗ ತನ್ನ ಶರೀರವನ್ನು ಆಭರಣ, ಅಲಂಕಾರ, ಗಂಧ, ಮಾಲೆ, ಹೊಸಬಟ್ಟೆ, ತಾಂಬೂಲ ಮುಂತಾದವುಗಳಿಂದ ಶೃಂಗಾರಮಾಡಿಕೊಳ್ಳಬಾರದು. ಮೇಲಿಂದ ಮೇಲೆ ಪತಿಯ ಹೆಸರನ್ನು ಉಚ್ಚರಿಸಬಾರದು.[೧] ಪತಿಯ ನಾಮೋಚ್ಚಾರಣೆಯಿಂದ ಅವನ ಆಯುಷ್ಯವು ಕ್ಷೀಣವಾಗುತ್ತದೆ. ಪರಪುರುಷರ ನಾಮವನ್ನು ಉಚ್ಚಾರಮಾಡಬಾರದು. ಅವರೊಡನೆ ಮಾತನಾಡಬಾರದು. ಪತಿಯ ಅಪ್ಪಣೆಯನ್ನು ಪಾಲಿಸಬೇಕು. ಅವನ ಸಮ್ಮತಿ ಇಲ್ಲದೇ ಯಾವ ಕೆಲಸ ಮಾಡಬಾರದು. ಆದರೆ ಪತಿಯು ಹೇಳದಿದ್ದರೂ ಅವನ ಸೇವೆ, ಬಟ್ಟೆ ಬರೆಗಳನ್ನು ಸ್ವಚ್ಛಮಾಡಬೇಕು. ದೇವರ ಪೂಜೆ ಮುಂತಾದ ಕಾರ್ಯಗಳಲ್ಲಿ ಅವನಿಗೆ ಎಲ್ಲರೀತಿ ಸಹಾಯಮಾಡಬೇಕು. ಪತಿಯ ಅಪ್ಪಣೆಯಿಲ್ಲದೇ ವ್ರತ, ಉಪವಾಸ, ತೀರ್ಥಯಾತ್ರೆ, ವಿವಾಹ, ಉತ್ಸವ, ಯಾವ ಕಾರ್ಯವನ್ನೂ ಮಾಡಬಾರದು. ಪತಿಯ ಸಮ್ಮತಿಯಿಲ್ಲದೇ ಮಾಡಿದ ಈ ಕಾರ್ಯಗಳು ನಿಷ್ಫಲವಾಗುತ್ತವೆ ಮತ್ತು ಪತಿಯ ಆಯುಷ್ಯವನ್ನು ಕ್ಷೀಣಮಾಡುತ್ತವೆ.

---

೧) ಗುರೋರ್ನಾಮ ನ ಗೃಣ್ಹೀಯಾತ್ ಶಿಷ್ಯೋಭಾರ್ಯಾ ಪತೇರಪಿ ॥

(ಬ್ರಹ್ಮಸೂತ್ರಭಾಷ್ಯ)

ಪತಿಯನ್ನು ನಿಂದಿಸುವ ಅಥವಾ ದ್ವೇಷಿಸುವ ಸ್ತ್ರೀಯರ ಸಂಪರ್ಕವನ್ನು ಇಟ್ಟುಕೊಳ್ಳಬಾರದು. ಪತಿಯು ಊರಲ್ಲಿ ಇಲ್ಲದಾಗ ಒಬ್ಬಳೇ ಮನೆಯಲ್ಲಿ ಇರಬಾರದು. ಬಟ್ಟೆಧರಿಸದೇ ಮೈ ತೊಳೆಯಬಾರದು.

ಒರಳು, ಒನಿಕೆ, ಪೊರಕೆ, ಬೀಸುವಕಲ್ಲು, ಹೊಸ್ತಿಲು ಇವುಗಳ ಮೇಲೆ ಕುಳಿತುಕೊಳ್ಳಬಾರದು. ಪತಿಯ ಎದುರಿನಲ್ಲಿ ಅಹಂಕಾರ, ಜಂಭ, ಹುಚ್ಚು ಧೈರ್ಯಗಳನ್ನು ತೋರಿಸಬಾರದು.

ಪತಿಯು ರೋಗಿಯಾಗಿದ್ದರೂ, ವೃದ್ಧನಾಗಿದ್ದರೂ, ದರಿದ್ರ, ದೀನ, ದುಃಖಿತನಾಗಿದ್ದರೂ ಅವನನ್ನು ತ್ಯಜಿಸಬಾರದು. ಕಬ್ಬಿಣ ಪಾತ್ರೆಯಲ್ಲಿ ಭೋಜನ ಮಾಡಬಾರದು.

ಪತಿಯ ಮಾತಿಗೆ ಸಿಟ್ಟಿನಿಂದ ಉತ್ತರಕೊಟ್ಟ ನಾರಿಯು ಜನ್ಮಾಂತರದಲ್ಲಿ ನಾಯಿಯಾಗಿ ಹುಟ್ಟುವಳು ಅಥವಾ ಕಾಡಿನಲ್ಲಿ ನರಿಯಾಗಿ ಜನಿಸುವಳು. ಗುರುಹಿರಿಯರ ಎದುರಿನಲ್ಲಿ ಗಟ್ಟಿಯಾಗಿ ಮಾತಾಡಬಾರದು.

ಪತಿಯನ್ನು ಬಿಟ್ಟು ತಾನೊಬ್ಬಳೇ ಭಕ್ಷ್ಯ ಭೋಜ್ಯ, ಸಿಹಿತಿಂಡಿಗಳನ್ನು ತಿಂದರೆ ಹಂದಿಯಾಗಿ ಹುಟ್ಟುತ್ತಾಳೆ. ಗಂಡನಿಗೆ ನೀನು, ತಾನು ಎಂದು ಅನಾದರ ಮಾಡಿ ಮಾತಾಡಿದರೆ ಮುಂದೆ ಕಿವುಡಿಯಾಗಿ ಹುಟ್ಟುತ್ತಾಳೆ.

ತಂದೆ, ತಾಯಿ, ಅಣ್ಣ, ತಮ್ಮಂದಿರು ಮೊದಲಾದವರು ಎಷ್ಟೇ ಕೊಟ್ಟರೂ ಪರಿಮಿತವಾಗಿಯೇ ಕೊಡುತ್ತಾರೆ. ಲೆಕ್ಕವಿಲ್ಲದೇ ಅಪರಿಮಿತಕೊಡುವವನು ಪತಿಯು ಮಾತ್ರ ಎಂದು ತಿಳಿಯಬೇಕು.

ಪತಿವ್ರತಾ ಸ್ತ್ರೀಯರಿಗೆ ಪತಿಯೇ ದೇವರು. ಪತಿಪೂಜೆಯೇ ಅವರ ಮುಖ್ಯ ಧರ್ಮ. ಇಂಥ ಪತಿವ್ರತೆಯನ್ನು ನೋಡಿದರೆ ಬೆಂಕಿಯು ಕೂಡ ನಡುಗುತ್ತದೆ. ಪತಿವ್ರತೆಯರು ಮುಟ್ಟಿದ ವಸ್ತು ಮೆಟ್ಟಿದ ನೆಲ, ಇದ್ದ ಮನೆ, ಮಿಂದ ಜಲ ಎಲ್ಲವೂ ತೀರ್ಥದಷ್ಟು ಪವಿತ್ರ.

ಗೃಹಸ್ಥಾಶ್ರಮಕ್ಕೆ ಮೂಲಾಧಾರ ಪತ್ನಿಯೇ ಆಗಿದ್ದಾಳೆ. ಧರ್ಮದ ಫಲ ಅವಳ ಅಧೀನವಾಗಿದೆ. ಯಾವನ ಮನೆಯಲ್ಲಿ ಪತಿವ್ರತೆಯಾದ ನಾರಿಯು ನೆಲೆಸಿರುತ್ತಾಳೋ ಅದೇ ಮಂಗಳ ಮಂದಿರವಾಗಿದೆ. ಪತಿವ್ರತೆಯ ದರ್ಶನ ಮಾಡಿಕೊಂಡರೆ ಮನೆಯ ಜನರೆಲ್ಲ ಪವಿತ್ರರಾಗುತ್ತಾರೆ. ಪತಿವ್ರತಾಸ್ತ್ರೀ ಮನೆಯಲ್ಲಿದ್ದರೆ ಅದರಿಂದ ಪಿತೃಗಳಿಗೆ ಸಮಾಧಾನ ಮತ್ತು ಅತಿಥಿಗಳಿಗೆ ತೃಪ್ತಿಯುಂಟಾಗುತ್ತದೆ.

ದುರ್ದೈವವಶಾತ್ ಪತಿಯ ವಿಯೋಗವಾದರೆ ಪತಿಯ ಅಂತರ್ಗತನಾದ ವಿಷ್ಣುವನ್ನು ನಿತ್ಯವೂ ಧ್ಯಾನಿಸುತ್ತಿರಬೇಕು. ಪತಿರಹಿತಳಾದ ಪತಿವ್ರತೆಯು ಪಲ್ಲಂಗದ ಮೇಲೆ ಸುಖ ಸುಪ್ಪತ್ತಿಗೆಯಲ್ಲಿ ಮಲಗಬಾರದು. ನೆಲದ ಮೇಲೆ ಶಯನ ಮಾಡಬೇಕು. ತನ್ನ ಶರೀರವನ್ನು ಶೃಂಗರಿಸಿಕೊಳ್ಳಬಾರದು. ವಿಲಾಸೀ ವಸ್ತುಗಳನ್ನು ಸೇವನೆ

ಮಾಡಬಾರದು. ಸುಗಂಧ ದ್ರವ್ಯಗಳನ್ನು ಉಪಯೋಗಿಸಬಾರದು. ತರ್ಪಣ ಕೊಡುವ ಮಕ್ಕಳಿಲ್ಲವಾದರೆ ತಾನೇ ಪತಿ, ಪತಿಯ ತಂದೆ, ಪತಿಯ ತಂದೆಯ ತಂದೆ ಇವರ ಹೆಸರನ್ನು ಉಚ್ಚರಿಸಿ (೩ ಸಲ) ದರ್ಭೆಹಾಕಿದ ನೀರಿನಿಂದ ತರ್ಪಣ ಕೊಡಬೇಕು. ಪತಿಗೆ ಇಷ್ಟವಾದ ವಸ್ತುಗಳನ್ನು ಸದಾಚಾರಿಗಳಾದ ಬ್ರಾಹ್ಮಣರಿಗೆ ದಾನ ಕೊಡಬೇಕು. ಸ್ನಾನ, ದಾನ, ತೀರ್ಥಯಾತ್ರೆ ಪುರಾಣಶ್ರವಣಗಳನ್ನು ತಪ್ಪದೇ ಮಾಡುತ್ತಿರಬೇಕು.

ಪತಿರಹಿತಳಾದ ಸ್ತ್ರೀಗೆ 'ವಿಧವೆ' ಎಂದೂ ಕರೆಯುವದುಂಟು ಅದರ ಅರ್ಥ ಹೀಗಿದೆ–

ವಿ = ವಿಷ್ಣು (ವಿಃ ಪಕ್ಷಿ ಪರಮಾತ್ಮನೋಃ ಎಂಬಂತೆ)

ಧವ = ಪತಿ

ವಿಷ್ಣುವನ್ನೇ ಪತಿ (ಒಡೆಯ)ಯಾಗಿ ಉಳ್ಳವಳು ಎಂದರ್ಥ

ಹಾಗಾಗಿ ತನ್ನ ಪತ್ಯಂತರ್ಗತ ವಿಷ್ಣುವನ್ನೇ ಸೇವೆ ಮಾಡುತ್ತ, ವಿಷ್ಣುವಿನ ಕಥೆಗಳನ್ನೇ ಕೇಳುತ್ತ ಅವಳು ಕಾಲಕಳೆಯಬೇಕು.

ಇನ್ನು ಅವಳು 'ಸಂನ್ಯಾಸ' ಧರ್ಮಗಳನ್ನು ಪಾಲಿಸುತ್ತ ಇರುವುದು ಪತಿಗೂ, ಪತಿವ್ರತೆಗೂ ಶ್ರೇಯಸ್ಕರವಾಗಿದೆ.

ಆತ್ಮಶುದ್ಧಿಗಾಗಿ, ಸಂನ್ಯಾಸ ಧರ್ಮ ಪಾಲಿಸಲು, ಶಾಸ್ತ್ರಕಾರರು ಅವಳಿಗೆ ಮುಂಡನ ಮಾಡಿಸಿಕೊಳ್ಳಬೇಕೆಂದು ವಿಧಿಸಿದ್ದಾರೆ. ಅವಳು ಹೀಗೆ ಅನುಸಂಧಾನ ಮಾಡಬೇಕು.

ಮೇರು ಮಂದರ ಪರ್ವತದಷ್ಟು ಪಾಪಗಳು ಕೇಶಗಳನ್ನು ಆಶ್ರಯಿಸಿ ಇರುವ ಪ್ರಯುಕ್ತ ನಾನು ಕೇಶಗಳನ್ನು ವಿಸರ್ಜಿಸುತ್ತೇನೆ. ಆತ್ಮಶುದ್ಧಿಗಾಗಿ, ಪತಿಯ ಮುಕ್ತಿಗೆ ಕಾರಣವಾಗಲೆಂದು ಕೇಶಗಳನ್ನು ಬ್ರಾಹ್ಮಣರ ಸನ್ನಿಧಿಯಲ್ಲಿ ವಿಸರ್ಜಿಸುತ್ತೇನೆ.*

ಈ ರೀತಿಯಾಗಿ ಕೇಶಗಳನ್ನು ವಿಸರ್ಜಿಸಿದ ಪತಿವ್ರತೆಯಾದ ಸ್ತ್ರೀಯು ಆ ಭಗವಂತನಿಗೆ ನೈವೇದ್ಯಕ್ಕೆ ಅಡಿಗೆ ಮುಂತಾದ ಎಲ್ಲ ಕಾರ್ಯಗಳನ್ನು ಮಾಡಲು ಅರ್ಹಳು. ಅವಳಿಂದ ಮಾಡಲ್ಪಟ್ಟ ಅಡಿಗೆ ನೈವೇದ್ಯಕ್ಕೆ ಗ್ರಾಹ್ಯವಾಗುತ್ತದೆ.

ಇಂಥ ಧರ್ಮಗಳನ್ನು ಪಾಲಿಸುತ್ತ ಸಂನ್ಯಾಸಿನಿಯಾಗಿ ಭಗವಂತನ ಸೇವೆ ಮಾಡಿ ತನ್ನ ಜೀವನವನ್ನು ಸಾರ್ಥಕ ಮಾಡಿಕೊಳ್ಳಬೇಕು.

– ⊙ –

---

* ಮೇರು ಮಂದಾರ ತುಲ್ಯಾನಿ ಪಾಪಾನಿ ವಿವಿಧಾನಿ ಚ ।
ಕೇಶಾನಾಶ್ರಿತ್ಯ ತಿಷ್ಠಂತಿ ತಸ್ಮಾತ್ ಕೇಶಾನ್ ವಪಾಮ್ಯಹಮ್ ॥
ಆತ್ಮನ ಶ್ಶುದ್ಧಿ ಕಾಮೋವಾ ಭರ್ತವೇ ಮುಕ್ತಿ ಹೇತವೇ ।
ವಪನಂ ಕಾರಯಿಷ್ಯಾಮಿ ತೀರೇ ಬ್ರಾಹ್ಮಣ ಸನ್ನಿಧೌ ॥

# ಸ್ತ್ರೀ ಜೀವನದ ಸಾರ್ಥಕತೆ - ತಾಯಿಯಾಗಿ!

ಈ ಪ್ರಪಂಚದಲ್ಲಿ ಮಾನವನಿಗೆ ಪಾಂಚಭೌತಿಕ ಶರೀರವನ್ನು ಪಡೆಯಲು ಕಾರಣಳಾದವಳು ತಾಯಿ. ಸಂಸಾರದಲ್ಲಿ ಆರ್ತರಾಗಿರುವ ಎಲ್ಲರಿಗೂ ಸುಖಸಾಂತ್ವನಗಳನ್ನು ಕೊಡುವವಳು ತಾಯಿ. ತಾಯಿ ಇರುವವನು ಸನಾಥನು. ತಾಯಿ ಇಲ್ಲದಿರುವವನು ಅನಾಥನೆನಿಸಿಕೊಳ್ಳುತ್ತಾನೆ.

ಮಕ್ಕಳು ಮೊಮ್ಮಕ್ಕಳಿಂದ ಕೂಡಿದ ಮನುಷ್ಯನು ನೂರು ವರ್ಷಕ್ಕಿಂತ ಹೆಚ್ಚು ವಯಸ್ಸಿನವನಾಗಿದ್ದರೂ ತನ್ನ ತಾಯಿಯ ಆಸರೆಯಲ್ಲಿ ಬದುಕುವವನಾಗಿದ್ದರೆ ಆತನು ಎರಡು ವರ್ಷದ ಮುಗ್ಧ ಮಗುವಿನಂತೆ ನಡೆದುಕೊಳ್ಳುತ್ತಾನೆ. ಪುತ್ರನು ಸಮರ್ಥನಿರಲಿ, ಅಸಮರ್ಥನಿರಲಿ, ಪುಷ್ಟನಾಗಿರಲಿ, ದುರ್ಬಲನಾಗಿರಲಿ, ತಾಯಿಯಾದವಳು ಯಾವುದೇ ವಿಧದ ತಾರತಮ್ಯವನ್ನು ತೋರದೇ ರಕ್ಷಿಸುತ್ತಾಳೆ. ವಿಹಿತವಾದ ರೀತಿಯಲ್ಲಿ ಮಕ್ಕಳನ್ನು ಪೋಷಿಸತಕ್ಕವರಲ್ಲಿ ತಾಯಿಯನ್ನು ಬಿಟ್ಟು ಬೇರೆ ಯಾರೂ ಇರುವದಿಲ್ಲ, ಅಂತೆಯೇ "ಮಾತುಃ ಸಮಂ ನಾಸ್ತಿ ಶರೀರ ಪೋಷಣಂ" ಎಂಬ ಮಾತು ಸಾರ್ಥಕವಾಗಿ ಬಂದಿದೆ.

ತಾಯಿ ಇರುವವನು ಯಾವಾಗಲೂ ಯಾವುದಕ್ಕೂ ಶೋಕಪಡುವದಿಲ್ಲ. ಶೋಕವಾಗಲಿ, ಚಿಂತೆಯಾಗಲಿ ಇಲ್ಲದಿರುವುದರಿಂದ ವೃದ್ಧಾಪ್ಯವು ಅವನನ್ನು ಆಕ್ರಮಿಸುವದಿಲ್ಲ. ನಿರ್ಧನನಾಗಿದ್ದರೂ ಅಮ್ಮಾ ! ಎಂದು ಕೂಗುತ್ತ ಮನೆಯೊಳಗೆ ಪ್ರವೇಶಿಸುವ ಜೀವನ್ಮಾತೃಕನಿಗೆ ದುಃಖವೆಂದಿಗೂ ಹತ್ತಿರ ಸುಳಿಯಲಾರದು.

ಮಗುವು ಹುಟ್ಟಿದೊಡನೆಯೇ ಮೊಲೆಹಾಲು ಉಣಿಸುವದರಿಂದ ಆರಂಭಿಸಿ ತಾಯಿಯು ಮಕ್ಕಳನ್ನು ಪೋಷಿಸುತ್ತಾಳೆ. ಮುಂದೆ ಬಾಲ್ಯದಲ್ಲಿ ಉತ್ತಮ ಆಹಾರಕೊಟ್ಟು, ಪ್ರೌಢನಾದ ಮೇಲೆ ಅವನ ಆರೋಗ್ಯ ಆಹಾರಗಳ ಕುರಿತು ಎಚ್ಚರಿಕೆ ವಹಿಸಿ ತಾಯಿಯು ಕಾಪಾಡುತ್ತಾಳೆ. ತಾಯಿಗೆ ತನ್ನ ಅಂತ್ಯಕಾಲದ ವರೆಗೆ ಮಗನು ಮಗುವಾಗಿಯೇ ಕಾಣಿಸುತ್ತಾನೆ. ಮಗನ ಸರ್ವತೋಮುಖ ಅಭಿವೃದ್ಧಿಯೇ ಅವಳ ಜೀವನದ ಮುಖ್ಯಗುರಿ. ಮಕ್ಕಳಿಗಾಗಿ ತಾಯಿಯು ಮಾಡುವಷ್ಟು ತ್ಯಾಗವನ್ನು ಬೇರೆ ಯಾರೂ ಮಾಡುವದಿಲ್ಲ. ಇದರಲ್ಲಿಯೇ ಅವಳಿಗೆ ಜೀವನದ ಸಾರ್ಥಕ್ಯ. ಸಂತೋಷ, ಹೆಮ್ಮೆ ಎಂದರೆ ಅತಿಶಯೋಕ್ತಿಯಲ್ಲ.

ಇತ್ತೀಚಿನ ದಿನಗಳಲ್ಲಿ ತಾಯ್ತನದ ಕಲ್ಪನೆ ಬಹಳವಾಗಿ ಬದಲಾಗಿದೆ. ಇಂದಿನ ತಾಯಂದಿರು ಮಗುವಿಗೆ ಮೊಲೆ ಹಾಲು ಕೊಟ್ಟರೆ ತಮ್ಮ ಸೌಂದರ್ಯ ಹಾಳಾಗುತ್ತದೆ ಎಂಬ ತಪ್ಪುಕಲ್ಪನೆ, ಭ್ರಮೆಗೆ ಒಳಗಾಗಿದ್ದಾರೆ. ಮೊಲೆ ಹಾಲನ್ನು ಮಕ್ಕಳಿಗೆ ಕೊಡುವ ತಾಯಿಯ ಮುಖದ ಕಳೆ ಸೌಂದರ್ಯ ಅಪೂರ್ವವಾದುದು. ಅದನ್ನು ಕೊಡದೇ ಇರುವವರ ಮುಖದಲ್ಲಿ ಅಷ್ಟೊಂದು ಸೌಂದರ್ಯ ಇರುವದಿಲ್ಲ. ಆದರೆ ಸೌಂದರ್ಯದ ಕಲ್ಪನೆ ಅಥವಾ ವ್ಯಾಖ್ಯೆಯೇ ಭಿನ್ನವಾದರೆ ಉಪಾಯವಿಲ್ಲ. ಇನ್ನು ಬಾಲ್ಯದಲ್ಲಿ ಮಕ್ಕಳಿಗೆ ತಾಯಿಯಿಂದ ಪೋಷಣೆ ದೊರೆಯುತ್ತಿಲ್ಲ. ತಂದೆ ತಾಯಿಗಳಿಬ್ಬರೂ ನೌಕರಿ ಮಾಡುವ ಕುಟುಂಬಗಳೇ ಹೆಚ್ಚಾಗುತ್ತಿವೆ. ಆದ್ದರಿಂದ ಮಕ್ಕಳಿಗೆ ಬೇಬಿ ಸಿಟಿಂಗ ಹೋಮ್, ಇತ್ಯಾದಿಗಳೇ ಗತಿ. ದಿನದ ಬಹುಭಾಗವನ್ನು ತಂದೆ ತಾಯಿಗಳನ್ನು ಬಿಟ್ಟು ಕಳೆಯುವದರಿಂದ ಅವರಲ್ಲಿ ಆತ್ಮೀಯತೆಯೇ ಬೆಳೆಯುವದಿಲ್ಲ. Attachment ಕಡಿಮೆಯಾಗಿಬಿಡುತ್ತದೆ. ಇದರ ಪರಿಣಾಮ ಅವರು ಪ್ರೌಢರಾದಾಗ ಕಂಡುಬರುತ್ತದೆ. ತಮ್ಮ ಮಕ್ಕಳನ್ನು ನೋಡಿಕೊಳ್ಳುವ ಕರ್ತವ್ಯವೊಂದಿದೆ ಎಂಬುದನ್ನು ಮರೆತು ತಮ್ಮ ನೌಕರಿ, ಆಸೆ, ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳಲು ಪ್ರಯತ್ನಿಸುವುದು ಕಂಡಿದೆ. ಇದು ಅವರನ್ನು ಟೀಕಿಸುವುದಕ್ಕಾಗಿ ಹೇಳುವ ಮಾತಲ್ಲ. ಇದರಿಂದ ಮಕ್ಕಳು ಸರಿಯಾದ ಪೋಷಣೆ, ಮಾತೃವಾತ್ಸಲ್ಯ, ಇಲ್ಲದೇ ತಮ್ಮ ತಾಯಿಗೆ ಪರಕೀಯರಂತೆ ಆಗುತ್ತಿರುವುದು ಶೋಚನೀಯ ಸ್ಥಿತಿ. ಪುರುಷ ಪ್ರಧಾನತೆಯನ್ನು ಪ್ರತಿಭಟಿಸುವ ಕೆಲವು ಸ್ತ್ರೀಯರ ದೂಷಿತ ವಿಚಾರಗಳಿಂದಾಗಿ ಹೆಚ್ಚಿನ ಸ್ತ್ರೀಯರು ಇಂಥ ತಾಯ್ತನದ ಕರ್ತವ್ಯತೆಯಿಂದ ದೂರಸರಿಯುತ್ತಿದ್ದಾರೆ. ಅದರ ಕೆಟ್ಟ ಪರಿಣಾಮವನ್ನು ಅನುಭವಿಸುವವರು, ಅವರ ಮಕ್ಕಳೇ ಆಗಿದ್ದಾರೆ. ಇದು ಸಮಾಜದ ಮೇಲೆ ಕೂಡ ದುಷ್ಪರಿಣಾಮವನ್ನು ಕಾಲಾಂತರದಲ್ಲಿ ತಂದೊಡ್ಡುವದು ಸ್ವಾಭಾವಿಕ.

ಇನ್ನು ಮನುಷ್ಯನು ಯಾವಾಗ ತಾಯಿಯಿಂದ ವಿಯೋಗ ಹೊಂದುವನೋ ಆಗ ಅವನು ವೃದ್ಧನಾಗುತ್ತಾನೆ. ದುಃಖಿತನಾಗುತ್ತಾನೆ. ಆಗಲೇ ಅವನಿಗೆ ಜಗತ್ತೆಲ್ಲವೂ ಶೂನ್ಯವಾಗಿ ಕಾಣುತ್ತದೆ. ನಾನು ಅನಾಥ ಎಂಬ ಭಾವನೆ ಬಂದುಬಿಡುತ್ತದೆ.

ತಾಯಿಗೆ ಸಮಾನವಾದ ತೀರ್ಥಬೇರಿಲ್ಲ. ತಾಯಿಗೆ ಸದೃಶವಾದ ಆಶ್ರಯ ಬೇರಿಲ್ಲ. ತಾಯಿಗೆ ಸಮಾನವಾದ ರಕ್ಷಕ ಬೇರೊಬ್ಬರಿಲ್ಲ. ತಾಯಿಯಂತಹ ಅರವಟ್ಟಿಗೆ ಬೇರೆ ಇಲ್ಲ.[೧]

ತಾಯಿಯು ಮಗನನ್ನು ತನ್ನ ಗರ್ಭದಲ್ಲಿ ಧರಿಸುವುದರಿಂದ 'ಧಾತ್ರೀ' ಎನಿಸಿದ್ದಾಳೆ. ಮಗನನ್ನು ಪಡೆಯುವ ಕಾರಣ 'ಜನನೀ' ಎಂದೆನಿಸಿದ್ದಾಳೆ. ಕಾಲಕಾಲಕ್ಕೆ

---

೧) ನಾಸ್ತಿಮಾತ್ರಾಸಮಂ ತೀರ್ಥಂ ನಾಸ್ತಿ ಮಾತ್ರಾಸಮಾಗತಿಃ ।
ನಾಸ್ತಿಮಾತ್ರಾ ಸಮಂ ತ್ರಾಣಂ ನಾಸ್ತಿ ಮಾತ್ರಾ ಸಮಃ ಪ್ರಪಾ ॥
(ಪುರಾಣ ವಚನ)

ಆಹಾರಾದಿಗಳನ್ನಿತ್ತು ಮಕ್ಕಳ ಅಂಗಾಂಗಗಳನ್ನು ಬೆಳೆಸುವ ಪ್ರಯುಕ್ತ 'ಅಂಬಾ' ಎಂದೂ, ವೀರನಾದ ಮಗನನ್ನು ಪಡೆಯುವದರಿಂದ 'ವೀರಸೂ' ಎಂದೂ ಯಾವತ್ತೂ ಸನ್ಮಾನಿತಳಾಗುವದರಿಂದ 'ಮಾತಾ' ಎಂದೂ ಕರೆಯಲ್ಪಡುತ್ತಾಳೆ.[೧]

"ಮಾತೃದೇವೋ ಭವ" ಎಂಬುದು ತೈತ್ತರೀಯ ಉಪನಿಷತ್ತಿನ ದಿವ್ಯಸಂದೇಶ. ಕಾರಣ ತಾಯಿಯನ್ನು ಎಲ್ಲರೂ ಸನ್ಮಾನಿಸಬೇಕು, ಪೂಜಿಸಬೇಕು.

ಹೀಗೆ ನಮ್ಮ ಭಾರತೀಯ ಪರಂಪರೆಯಲ್ಲಿ ತಾಯಿಗೆ ಅತಿ ಪೂಜ್ಯವಾದ ಸ್ಥಾನವಿದೆ ಎಂಬ ವಿಷಯದಲ್ಲಿ ಎರಡು ಮಾತಿಲ್ಲ.

– ⊙ –

---

೧) ಕುಕ್ಷೌ ಸಂಧಾರಣಾದ್ಧಾತ್ರೀ ಜನನಾಜ್ಜನನೀ ತಥಾ ।
ಅಂಗಾನಾಂ ವರ್ಧನಾದಂಬಾ ವೀರಸೂತ್ವೇನ ವೀರಸೂಃ ।
ಶಿಶೋಃ ಶುಶ್ರೂಷಣಾಚ್ಛಕ್ತಿಃ ಮಾತಾಸ್ಯಾನ್ಮಾನನಾಚ್ಚಸಾ ॥
(ಶ್ರೀ ಸ್ಕಂದಮಹಾಪುರಾಣ)

# ರಜಸ್ವಲಾ ಸ್ತ್ರೀಯರ ಧರ್ಮಗಳು

ಶ್ರೀಮದ್‌ಭಾಗವತದಲ್ಲಿ ತಿಳಿಸಿದಂತೆ ದೇವೇಂದ್ರನು ವಿಶ್ವರೂಪಾಚಾರ್ಯರನ್ನು ಸಂಹರಿಸಿದ ಪ್ರಯುಕ್ತ ಸಂಭವಿಸಿದ ಬ್ರಹ್ಮಹತ್ಯಾ ದೋಷದ ಒಂದು ಭಾಗವನ್ನು ಸ್ತ್ರೀಯರಿಗೆ ಕೊಟ್ಟಿರುವನು. ಅದರ ಫಲವಾಗಿ ಸ್ತ್ರೀಯರಲ್ಲಿ ಪ್ರತಿ ತಿಂಗಳು ರಜಸ್ಸು ಕಾಣಿಸಿಕೊಳ್ಳುತ್ತದೆ.[೧]

ಬ್ರಹ್ಮಹತ್ಯೆಯೇ ರಜಸ್ಸಾಗಿ ಪ್ರತಿತಿಂಗಳು ಕಾಣಿಸಿಕೊಳ್ಳುವದೆಂದು ಇಲ್ಲಿ ತಿಳಿಸಿರುವುದಾದರೂ ದೇಹದ ಕಾಲುಷ್ಯರೂಪದಲ್ಲಿರುವ ರಜಸ್ಸು ಬ್ರಹ್ಮಹತ್ಯಾ ಪಾಪರೂಪದಲ್ಲಿ ಇರುವಂತಹದೆಂಬುದನ್ನು ಒಪ್ಪಲಾಗದು. ದೇವೇಂದ್ರನ ವಿತರಣೆಯಿಂದಾಗಿ ಪ್ರತಿ ತಿಂಗಳು ಮೂರುದಿನಗಳಲ್ಲಿ ಆಕ್ರಮಿಸುವ ಬ್ರಹ್ಮಹತ್ಯಾ ಪಾಪಕ್ಕೆ ದೈಹಿಕ ಪರಿವರ್ತನೆಯಾಗಿ ಸ್ರವಿಸುವ ರಜಸ್ಸು ಜ್ಞಾಪಕವೆಂದು ಅಭಿಪ್ರಾಯವು. ದೇವೇಂದ್ರ ಎಸಗಿದ ಅಪರಾಧಕ್ಕೆ ನಿರಪರಾಧಿಗಳಾದ ಸ್ತ್ರೀಯರು ಶಿಕ್ಷೆಯನ್ನೇಕೆ ಅನುಭವಿಸಬೇಕು ? ಎಂಬ ಪ್ರಶ್ನೆ ಸಹಜ. ಉತ್ತರ ಹೀಗಿದೆ–

ಇದು ದೇವೇಂದ್ರನು ಬಲಾತ್ಕಾರವಾಗಿ ಅಪರಾಧವನ್ನು ಸ್ತ್ರೀಯರ ಮೇಲೆ ಹೊರಿಸಿದ್ದಲ್ಲ. ಲೋಕ ಹಿತಕ್ಕಾಗಿ ತಾನು ಎಸಗಿದ ಬ್ರಹ್ಮಹತ್ಯೆಯನ್ನು ಸ್ತ್ರೀಯರ ಅನುಮತಿ ಪಡೆದು ಅವರಿಗೆ ಕೊಟ್ಟಿರುವನು. ಸ್ತ್ರೀಯರ ಈ ಉಪಕಾರಕ್ಕಾಗಿ ಅವರಿಗೆ ಒಂದು ವರ ನೀಡಿರುವನು. ಗರ್ಭಧಾರಣೆಯ ನಂತರವೂ ಪತಿಯ ಜೊತೆಗೆ ಸುಖ ಪಡೆಯಲು ಬೇಕಾದ ದೈಹಿಕ ವ್ಯವಸ್ಥೆಯು ದೇವೇಂದ್ರನ ವರದಿಂದಲೇ ದೊರಕಿದ್ದು. ಈ ವರದ ಲಾಭವನ್ನು ಸ್ತ್ರೀಯರು ಇಂದಿಗೂ ಪಡೆಯುತ್ತಿದ್ದಾರೆ. ಅಲ್ಲದೇ ಇದೆಲ್ಲವೂ ಆ ಭಗವಂತನಿಂದ ಸಂಕಲ್ಪಿತವಾಗಿ ನಿಯತವಾಗಿ ನಡೆಯುತ್ತಿದೆ ಎಂದು ತಿಳಿಯಬೇಕಾದುದು ಅತ್ಯವಶ್ಯ.[೨]

ಸ್ತ್ರೀಯರಲ್ಲಿ ರಜಸ್ಸು ಕಾಣಿಸುವ ಮೊದಲ ದಿನ ಅವಳು 'ಚಾಂಡಾಲೀ' ಎನಿಸುವಳು, ಎರಡನೆಯ ದಿನ 'ಬ್ರಹ್ಮಘಾತಿನೀ', ಮೂರನೆಯದಿನ 'ರಜಕೀ' (ಮಡಿವಾಳ ಸ್ತ್ರೀ) ಎನಿಸುವಳು, ನಾಲ್ಕನೆಯ ದಿನ ಶುದ್ಧಳಾಗುತ್ತಾಳೆ.[೩]

---

೧) ರಜೋರೂಪೇಣ ತಾಸ್ವಂಹೋ ಮಾಸಿ ಮಾಸಿ ಪ್ರದೃಶ್ಯತೇ ॥ ಶ್ರೀಮದ್‌ಭಾಗವತ (೬-೯-೯)

೨) ಯತ್ತ್ವದ್ ಭಗವತಾ ಕ್ಲಪ್ತಂ ತದೇವ ನಿಯತಂ ಭವೇತ್ ॥ ಭಾಗವತ್ ತಾತ್ಪರ್ಯ (ಪ್ರಕಾಶ ಸಂಹೀತಾ)

೩) ಪ್ರಥಮೇಽಹನಿ ಚಾಂಡಾಲೀ ದ್ವಿತೀಯೇ ಬ್ರಹ್ಮಘಾತಿನೀ ।
ತೃತೀಯೇ ರಜಕೀ ಪ್ರೋಕ್ತಾ ಚತುರ್ಥೇಽಹನಿಶುದ್ಧ್ಯತಿ ॥ (ಆಪಸ್ತಂಭಸ್ಮೃತಿ ೭-೪)

ಹೀಗೆ ಪ್ರತಿ ತಿಂಗಳು ರಜಸ್ಸಿನ ಸ್ರಾವದಿಂದಾಗಿ ಸ್ತ್ರೀಯರ ಮಾನಸಿಕ ಮುಂತಾದ ದುರಿತಗಳೆಲ್ಲ ದೂರಾಗಿ ಪವಿತ್ರರೆನಿಸುತ್ತಾರೆ. ಮೂರುರಾತ್ರಿ ಕಳೆದ ಬಳಿಕ (ಮುಟ್ಟು ಮೂರೇದಿನ) ಅಂದರೆ ನಾಲ್ಕನೆ ದಿನ ಸೂರ್ಯೋದಯದ ನಂತರ 'ಸಚೈಲ' ಸ್ನಾನ ಮಾಡಬೇಕು.

ಸ್ನಾನ ಮಾಡಿ ಪತಿಯ ಮುಖವನ್ನು ನೋಡಿ ಆಕೆ ಶುದ್ಧಳಾಗುವಳು. (ಪತಿ ಊರಲ್ಲಿಲ್ಲವಾದರೆ) ಅವಳು ಪತಿಯನ್ನು ಮನಸ್ಸಿನಲ್ಲಿ ಧ್ಯಾನಮಾಡಿ ಸೂರ್ಯನನ್ನು ನೋಡಿ ಶುದ್ಧಳಾಗಬೇಕು.[೪] ನಾಲ್ಕನೆಯ ದಿನ ಅವಳು ಪತಿಗೆ ಸಂಬಂಧಿಸಿದ ಕಾರ್ಯ ಮಾಡಲು ಶುದ್ಧಳೆನಿಸುತ್ತಾಳೆ. ಆದರೆ ದೇವತಾ, ಪಿತೃ ಕರ್ಮ ನಡೆಸಲು ಐದನೆಯ ದಿನ ಸ್ನಾನದ ಬಳಿಕ ಅರ್ಹಳಾಗುತ್ತಾಳೆ.[೫]

ಸ್ತ್ರೀಗೆ ರಜೋದರ್ಶನವಾದ ಕೂಡಲೇ ಯಾರಿಗೂ ಕಾಣಿಸದಂತೆ ಮನೆಯೊಳಗೆ ಇರಬೇಕು. ಏಕವಸ್ತ್ರಧರಿಸಿ, ಸ್ನಾನ, ಅಲಂಕಾರ ರಹಿತಳಾಗಿ, ಹೆಚ್ಚು ಮಾತಾಡದೇ, ಭೂಮಿಯ ಮೇಲೆ ಮಲಗಬೇಕು. ಹಗಲು ನಿದ್ರೆ ಮಾಡಬಾರದು. ತನ್ನ ಮಾತನ್ನು ಯಾರಿಗೂ ಕೇಳಿಸಬಾರದು. ಯಾವತ್ತೂ ಭಗವಂತನ ಸ್ಮರಣೆ ಮಾಡುತ್ತಿರಬೇಕು.

ರಜಸ್ವಲೆಯು ಅವಳಿಗೆ ಹೇಳಿದ ನಿಯಮ ಪಾಲಿಸದಿದ್ದರೆ ಸಂತತಿಯ ಮೇಲೆ ಅದರ ದುಷ್ಪರಿಣಾಮ ಉಂಟಾಗುತ್ತದೆಂದು ಧನ್ವಂತರೀ ಭಗವಂತನು ಹೇಳಿದ್ದಾನೆ.

ರಜಸ್ವಲಾ ಸ್ತ್ರೀಯು ಹಗಲು ನಿದ್ರಿಸಿದರೆ ಯಾವಾಗಲೂ ನಿದ್ದೆಮಾಡುವ, ಕಣ್ಣುಗಳಿಗೆ ಕಾಡಿಗೆ ಹಚ್ಚಿಕೊಂಡರೆ ಕುರುಡ, ಅತ್ತರೆ ದೃಷ್ಟಿದೋಷವುಳ್ಳ, ಸ್ನಾನಾನುಲೇಪನದಿಂದ ಶಾರೀರಿಕ ಪೀಡೆಯುಳ್ಳ, ಎಣ್ಣೆಯ ಅಭ್ಯಂಗದಿಂದ ಕುಷ್ಠರೋಗವುಳ್ಳ, ಓಡುವುದರಿಂದ ಚಂಚಲನಾದ, ನಗುವುದರಿಂದ ಕಪ್ಪು ತುಟಿಯುಳ್ಳ. ಬಹಳ ಬಡಬಡಿಸಿದರೆ ಪ್ರಲಾಪಿ, ದೊಡ್ಡಸಪ್ಪಳ ಕೇಳಿದರೆ ಕಿವುಡ, ಅತಿ ಪರಿಶ್ರಮದಿಂದ ಹುಚ್ಚ ಮೊದಲಾದ ಸಂತತಿಯನ್ನು ಪಡೆಯುತ್ತಾಳೆ.[೬] ಕಾರಣ ಈ ನಿಯಮ ಪಾಲಿಸಬೇಕು.

– ⊙ –

---

೪) ಸುಸ್ನಾತಾ ಭರ್ತೃವದನಂ ಪಶ್ಯೇದನ್ಯಸ್ಯ ನ ಕ್ವಚಿತ್ ।
ಅಥವಾ ಮನಸಿ ಧ್ಯಾತ್ವಾ ಪತಿಂ ಭಾನುಂ ವಿಲೋಕಯೇತ್ ॥ (ಕಾಶೀಖಂಡ)

೫) ಶುದ್ಧಾ ಭರ್ತುಶ್ಚತುರ್ಥೇಽಹ್ನಿ ಸ್ನಾನೇನ ಸ್ತ್ರೀ ರಜಸ್ವಲಾ ।
ದೈವೇ ಕರ್ಮಣಿ ಪಿತ್ರ್ಯೇ ಚ ಪಂಚಮೇಽಹನಿ ಶುದ್ಧ್ಯತಿ ॥ ಶಂಖ ಸ್ಮೃತಿ (೧೬-೧೭)

೬) ದಿವಾಸ್ವಪತ್ಯಾಃ ಸ್ವಾಪಶೀಲೋ, ಅಂಜನಾದಂಧೋ, ರೋದನಾದ್ವಿಕೃತದೃಷ್ಟಿಃ, ಸ್ನಾನಾನುಲೇಪನಾದ್ದುಃಖಶೀಲಃ ತೈಲಾಭ್ಯಂಗಾತ್ಕುಷ್ಠೀ, ನಖಕರ್ತನಾತ್ ಕುನಖೀ, ಪ್ರಧಾವನಾಚ್ಚಂಚಲಃ, ಹಸನಾಚ್ಛ್ಯಾವದಂತೀ ಓಷ್ಠತಾಲುಜಿಹ್ವಃ, ಪ್ರಲಾಪೀಚಾತಿಕಥನಾತ್, ಅತಿಶಬ್ದಶ್ರವಣಾತ್ ಬಧಿರಃ, ಮರುತಾಯಸ ಸೇವಯೋನ್ಮತ್ತಃ ಗರ್ಭೋ ಭವತೀತ್ಯೇವಮೇತಾನ್ ಪರಿಹರೇತ್ ॥ (ಸುಶ್ರುತ ಶಾರೀರ ಸ್ಥಾನ ಅ. ೨/೫)

# ಗೃಹಿಣೀ ಗೃಹಮುಚ್ಯತೇ ಏಕೆ ?

ಮನೆಯಲ್ಲಿ ಗೃಹಿಣಿಯಾಗಿ ಭಾಗವಹಿಸುವ ಸ್ತ್ರೀಯ ಪಾತ್ರ ಮಹತ್ವಪೂರ್ಣವಾಗಿದೆ. ಶ್ರೀಮನ್ ಮಹಾಭಾರತ ಶಾಂತಿಪರ್ವದಲ್ಲಿ ಈ ಮಾತು ಬರುತ್ತದೆ.

ಬರೀ ಗೋಡೆ, ಕಂಬಗಳಿಂದ ಕೂಡಿದ ನಿವೇಶನವು ಮನೆ ಎನಿಸದು. ಆ ಮನೆಯು ಗೃಹಿಣಿಯಿಂದ ಕೂಡಿದಾಗ ಮಾತ್ರ ಗೃಹವೆನಿಸುವ ಪ್ರಯುಕ್ತ 'ಗೃಹಿಣಿಯೇ ಗೃಹ'ವೆಂದು ಹೇಳಲಾಗುತ್ತದೆ. ಗೃಹಿಣಿ ಇಲ್ಲದ ಮನೆಯು ಅರಣ್ಯಕ್ಕೆ ಸದೃಶವಾದುದು.[೧]

ಮನೆಯಲ್ಲಿ ಗೃಹಿಣಿಯೊಬ್ಬಳೇ ಇರುವದಿಲ್ಲ. ಪುತ್ರ, ಪುತ್ರೀ, ಪೌತ್ರ, ಭೃತ್ಯ ಇವರೆಲ್ಲ ಇರುವರು. ಆದರೆ ಪುತ್ರಾದಿಗಳೆಲ್ಲರೂ ಇದ್ದರೂ ಗೃಹಿಣಿಯೊಬ್ಬಳು ಇಲ್ಲವಾದರೆ ಆ ಮನೆ ಬರೀ ಶೂನ್ಯವೆನಿಸುತ್ತದೆ.[೨]

ಯಾವ ಮನೆಯಲ್ಲಿ ಸಾಧ್ವಿಯಾದ, ಪ್ರಿಯವಾದಿನಿಯಾದ ಪತ್ನಿಯು ಇರುವದಿಲ್ಲವೋ ಆ ಮನೆ ಅರಣ್ಯಕ್ಕೆ ಸದೃಶವಾಗುವದರಿಂದ ಅಂತಹ ಮನೆಯಲ್ಲಿ ಇರುವ ಬದಲು ಅರಣ್ಯಕ್ಕೆ ಹೋಗಬೇಕು.[೩]

---

೧) ನ ಗೃಹಂ ಗೃಹಮಿತ್ಯಾಹುಃ ಗೃಹಿಣೀ ಗೃಹಮುಚ್ಯತೇ ।
ಗೃಹಂ ತು ಗೃಹಿಣೀ ಹೀನಮರಣ್ಯ ಸದೃಶಂ ಭವೇತ್ ॥
(ಶಾಂತಿಪರ್ವ, ಶ್ರೀಮನ್ ಮಹಾಭಾರತ)

೨) ಪುತ್ರ ಪೌತ್ರ ವಧೂ ಭೃತ್ಯೈರಾಕೀರ್ಣಮಪಿ ಸರ್ವತಃ ।
ಭಾರ್ಯಾ ಹೀನಂ ಗೃಹಸ್ಥಸ್ಯ ಶೂನ್ಯಮೇವ ಗೃಹಂ ಭವೇತ್ ॥
(ಶಾಂತಿಪರ್ವ, ಶ್ರೀಮನ್ ಮಹಾಭಾರತ)

೩) ಯಸ್ಯ ಭಾರ್ಯಾ ಗೃಹೇ ನಾಸ್ತಿ ಸಾಧ್ವೀಚ ಪ್ರಿಯವಾದಿನಿ ।
ಅರಣ್ಯಂ ತೇನ ಗಂತವ್ಯಂ ಯಥಾರಣ್ಯಂ ತಥಾ ಗೃಹಮ್ ॥
(ಶಾಂತಿಪರ್ವ, ಶ್ರೀಮನ್ ಮಹಾಭಾರತ)

ಪ್ರಿಯಳಾದ ಭಾರ್ಯೆ ಇರುವಳೆಂದರೆ ಮರದ ಬುಡವೂ ಮನೆ ಎನಿಸುತ್ತದೆ. ಪ್ರಿಯಳಾದ ಭಾರ್ಯೆ ಇಲ್ಲವಾದರೆ ಮಾಳಿಗೆ ಮನೆಯೂ ಅರಣ್ಯದಂತೆ ದುರ್ಗಮವಾಗುತ್ತದೆ.[೪]

ಭಾರ್ಯೆಗೆ ಸಮಾನವಾದ ಬಂಧುವಿಲ್ಲ. ಮತ್ತೊಂದು ಆಶ್ರಯವಿಲ್ಲ. ಧರ್ಮ ಸಂಗ್ರಹದಲ್ಲಿ ಭಾರ್ಯೆಗೆ ಸರಿದೂಗುವ ಸಹಕಾರಿ ಇನ್ನೊಬ್ಬರಿಲ್ಲ.[೫]

ಮನೆಯ ವ್ಯವಹಾರಗಳನ್ನು ದಕ್ಷಳಾಗಿ ನಿಭಾಯಿಸುವ, ಮಕ್ಕಳನ್ನು ಪಡೆಯುವ, ಪತಿಪ್ರಾಣಳಾಗಿದ್ದು, ಪತಿವ್ರತೆ ಎನಿಸುವವಳೇ ನಿಜವಾದ ಭಾರ್ಯೆ ಎನಿಸುತ್ತಾಳೆ.[೬]

ಯಾವ ಮನೆಯಲ್ಲಿ ಹೆಂಡತಿಯಿಂದ ಗಂಡನೂ, ಗಂಡನಿಂದ ಹೆಂಡತಿಯೂ, ತೃಪ್ತರಾಗಿ ಇರುವರೋ ಅಲ್ಲಿ ನಿಶ್ಚಿತವಾಗಿ ಮಂಗಲವುಂಟಾಗುತ್ತದೆ.[೭]

ಹೀಗೆ ಕುಟುಂಬದಲ್ಲಿ ಒಳ್ಳೆಯ ಪಾತ್ರವಹಿಸಬೇಕಾದ ಗೃಹಿಣಿಯು ಗಂಡನಿಗೆ ಅನುಕೂಲಕರಳಾಗಿರಬೇಕು. ಕುಶಲಬುದ್ಧಿ ಸಂಪನ್ನಳಾಗಿರಬೇಕು. ಶೀಲವತಿಯಾಗಿರಬೇಕು. ಇದರಿಂದ ಎಲ್ಲರಿಗೂ ಸುಖ ಸಮೃದ್ಧಿಗಳು ಲಭಿಸುತ್ತವೆ.

– ⊙ –

---

೪) ವೃಕ್ಷಮೂಲೇಽಪಿ ದಯಿತಾ ಯಸ್ಯ ತಿಷ್ಠತಿ ತದ್ ಗೃಹಮ್ ।
ಪ್ರಾಸಾದೋಽಪಿ ತಯಾ ಹೀನಃ ಕಾಂತಾರ ಇತಿ ನಿಶ್ಚಿತಮ್ ॥
(ಶಾಂತಿಪರ್ವ, ಶ್ರೀಮನ್ ಮಹಾಭಾರತ)

೫) ನಾಸ್ತಿ ಭಾರ್ಯಾ ಸಮೋ ಬಂಧುರ್ನಾಸ್ತಿ ಭಾರ್ಯಾ ಸಮಾಗತಿಃ ।
ನಾಸ್ತಿ ಭಾರ್ಯಾ ಸಮೋ ಲೋಕೇ ಸಹಾಯೋ ಧರ್ಮಸಂಗ್ರಹೇ ॥

೬) ಸಾ ಭಾರ್ಯಾ ಯಾ ಗೃಹೇ ದಕ್ಷಾ ಸಾ ಭಾರ್ಯಾ ಯಾ ಪ್ರಜಾವತೀ ।
ಸಾ ಭಾರ್ಯಾ ಯಾ ಪತಿಪ್ರಾಣಾ ಸಾ ಭಾರ್ಯಾ ಯಾ ಪತಿವ್ರತಾ ॥
ಹಿತೋಪದೇಶ (ಮಿತ್ರಲಾಭ)

೭) ಸಂತುಷ್ಟೋ ಭಾರ್ಯಯಾ ಭರ್ತಾ ಭರ್ತ್ರಾ ಭಾರ್ಯಾ ತಥೈವಚ ।
ಯಸ್ಮಿನ್ನೇವ ಕುಲೇ ನಿತ್ಯಂ ಕಲ್ಯಾಣಂ ತತ್ರ ವೈ ಧ್ರುವಮ್ ॥ (ಮನುಸ್ಮೃತಿ 3-60)

# ಅತ್ತೆ ಸೊಸೆ ಹೊಂದಾಣಿಕೆ ಹೇಗೆ ?

ಹೊಸದಾಗಿ ಅತ್ತೆಮನೆ ಸೇರಿದ ಸೊಸೆಗೆ ಪತಿಗೃಹ ನರಕಸದೃಶವಾಗಿತ್ತು. ಅತ್ತೆ ಯಾವಾಗಲೂ ಸೊಸೆಯ ತಪ್ಪು ಕಂಡುಹಿಡಿಯುತ್ತ ಸದಾ ವಟಗುಟ್ಟುತ್ತಿದ್ದಳು. ಅತ್ತೆ ಸೊಸೆಯರಿಬ್ಬರೂ ವೈರಿಗಳಂತೆ ಕಾಣುತ್ತಿದ್ದರು. ವಿದ್ಯಾವಂತೆ, ಬುದ್ಧಿವಂತೆ ಎನಿಸಿದ ಸೊಸೆಯೂ ಸಾಮಾನ್ಯಳಾಗಿರಲಿಲ್ಲ. ಅತ್ತೆ ಏನೇ ಹೇಳಿದರೂ, ಬೈದರೂ ಸೊಸೆ ಎಲ್ಲವನ್ನು ಸಹಿಸುತ್ತಿದ್ದಳು. ಕೆಲವು ಸಮಯದ ನಂತರ ಅವಳ ತಾಳ್ಮೆ ಮೂಲೆ ಸೇರಿತು. ಸರಿ, ದಿನಬೆಳಗಾದರೆ ಯುದ್ಧಕಾಂಡ ನಡೆಯುತ್ತಿತ್ತು. ಅತ್ತೆಗೆ ತನ್ನ ಮಗ ಮೊದಲಿನಂತೆ ತನ್ನನ್ನು ಪ್ರೀತಿಸುವದಿಲ್ಲ. ಹೆಂಡತಿಯ ಸೆರಗು ಹಿಡಿದು ಅವಳ ಹಿಂದೆ ಮುಂದೆ ತಿರುಗುತ್ತಾನೆ. ಅವಳ ಮಡಿಲಿಗೆ ಸೇರಿಬಿಟ್ಟಿದ್ದಾನೆಂಬ ಭ್ರಮೆ. ತನ್ನ ಪತಿ ಕೇವಲ ತನ್ನವನು ಮಾತ್ರ ಎಂಬ ಮೋಹ ಪತ್ನಿಗೆ.

ಸೊಸೆ ತುಂಬಾ ಬುದ್ಧಿವಂತೆ. ಈ ರೀತಿಯ ಬದುಕು ಬಹಳ ಕಾಲ ಸಹ್ಯವಲ್ಲ. ಇದಕ್ಕೊಂದು ಶಾಶ್ವತ ಪರಿಹಾರ ಕಂಡುಕೊಳ್ಳಬೇಕೆಂದು ವಿಚಾರಿಸಿ ಹಿರಿಯ ಮನೋವೈದ್ಯರೊಬ್ಬರನ್ನು ಭೇಟಿ ಮಾಡಿದಳು. ಸಮಸ್ಯೆ ಕೇಳಿದ ವೈದ್ಯರ ಮುಖದಲ್ಲಿ ಮಂದಹಾಸ ಸೂಸಿತ್ತು. ಬಹುಶಃ ಅವರ ನರೆತ ಕೂದಲುಗಳಷ್ಟು ಅಥವಾ ಅದಕ್ಕಿಂತ ಹೆಚ್ಚು ಬಾರಿ ಈ ಸಮಸ್ಯೆಯನ್ನು ಕೇಳಿರಬಹುದು. ವೈದ್ಯರು ಹೇಳಿದರು. ನೋಡಮ್ಮ ! ಇದಕ್ಕೊಂದು ಖಾತ್ರಿ ಮದ್ದಿದೆ. ಮೂರು ತಿಂಗಳ ಕಾಲದಲ್ಲಿ ನಿನ್ನತ್ತೆ ನೀನು ಹೇಳಿದಂತೆ ಕೇಳುವದು ಖಾತ್ರಿ. ಅವಳ ಆಹಾರದಲ್ಲಿ ನಾನು ಕೊಟ್ಟ ಒಂದು ಸಣ್ಣ ಚಮಚ ಪುಡಿಯನ್ನು ಸೇರಿಸಿದರೆ ಸಾಕು. ಆದರೆ ಈ ಔಷಧಿ ಸೇವನೆಯ ಅವಧಿಯಲ್ಲಿ ಅವಳು ಉದ್ರಿಕ್ತಳಾಗದಂತೆ ನೀನು ವರ್ತಿಸಬೇಕು. ಅಂದರೆ ನೀನು ಸಾಧ್ಯವಾದಷ್ಟು ಪ್ರೀತಿ-ಸಹನೆಯಿಂದ ಅವಳನ್ನು ಕಾಣಬೇಕು. ಶಾಂತ ವಾತಾವರಣದಲ್ಲಿ ಈ ಔಷಧಿ ಕೆಲಸ ಮಾಡುತ್ತದೆ.

ಸರಿ, ಮೂರುತಿಂಗಳು ಬಾಯಿ ಮುಚ್ಚಿ ಸಹನೆಯಿಂದ ಇದ್ದರೆ, ಜೀವಮಾನ ಪರ್ಯಂತ ನಿರಾತಂಕವಾಗಿ ಬದುಕಬಹುದಲ್ಲ ಎಂದು ಅಂದುಕೊಂಡ ಸೊಸೆ ಒಪ್ಪಿ ಬಂದಳು. ಆ ಚಿಟಿಕೆ ಪುಡಿಯನ್ನು ಆಹಾರದಲ್ಲಿ ಸೇರಿಸಿ ಅತ್ತೆಗೆ ಕೊಟ್ಟಳು. ನಂತರ ಅತ್ತೆಯು ಏನೇ ಅನ್ನಲಿ, ಬಯ್ಯಲಿ, ಕಿರಿಕಿರಿ ಮಾಡಲಿ ಸೊಸೆ ಬಾಯಿ ತೆರೆಯಲಿಲ್ಲ. ಬದಲಾಗಿ ನಗುನಗುತ್ತಲೇ ಅತ್ತೆಯನ್ನು ಸಂತೈಸತೊಡಗಿದಳು. ಎರಡು ವಾರ ಕಳೆಯುವದರೊಳಗೆ ಅತ್ತೆಯ ಬಾಯಿಗೆ ಬೀಗ ಬಿತ್ತು. ಎಂಥ ಸೊಸೆ, ಎಂಥ ಸಹನೆ, ಸೇವಾಭಾವ, ಪ್ರತಿದಿನವೂ ಅಡುಗೆಯಿಂದ ಉಡುಗುವವರೆಗೆ ಎಷ್ಟು ಚೆನ್ನಾಗಿ ಕೆಲಸ ಮಾಡುತ್ತಾಳೆ ಎಂದು ಹೊಗಳಲು ಸುರು

ಮಾಡಿದಳು ಅತ್ತೆ. ಇಷ್ಟು ದಿನ ಕಾಣದ ಅತ್ತೆಯ ಸುಗುಣಗಳು ಸೊಸೆಯ ಕಣ್ಣಿಗೆ ಕಾಣಲಾರಂಭಿಸಿದವು. ಸೊಸೆ ಸೊಸೆಯಾಗಿ ಉಳಿಯದೇ ಮಗಳಂತಾದಳು. ಮೂರುತಿಂಗಳು ದಾಟುವುದರೊಳಗಾಗಿ ಬದುಕು ಬದಲಾಯಿತು.

ಸೊಸೆ ಈಗ ತನ್ನ ಕೃತಜ್ಞತೆ ಸಲ್ಲಿಸಲು ವೈದ್ಯರ ಮನೆಗೆ ತೆರಳಿದಳು. ಅಲ್ಲಿ ತನ್ನ ಅತ್ತೆಯಲ್ಲಾದ ಬದಲಾವಣೆ, ತನ್ನನ್ನು ಮಗಳಂತೆ ಪ್ರೀತಿಸುವ ಮನಸ್ಸು, ಸುಖವಾಗಿ ಪರಿವರ್ತನೆಯಾದ ಸಂಸಾರದ ಕುರಿತು ತಿಳಿಸುತ್ತ ಅವರಿತ್ತ ಔಷಧಿಯ ಪ್ರಭಾವದಿಂದ ಇಷ್ಟೆಲ್ಲಾ ಒಳ್ಳೆಯ ಬದಲಾವಣೆ ನಡೆಯಿತೆಂದು ಹೇಳಿದಳು. ಆಗ ವೈದ್ಯರು ಮಂದಹಾಸಯುಕ್ತರಾಗಿ ನುಡಿದರು "ಔಷಧಿ ಎಂಥದಮ್ಮಾ ! ಅದೊಂದು ತುಳಸಿ ಪುಡಿ ಮಾತ್ರ". ಅದರಿಂದ ಈ ರೀತಿ ಪರಿವರ್ತನೆಯಾಯಿತು ಎಂದೇನೂ ಅಲ್ಲ. ಔಷಧವಾಗಿ ಕೆಲಸ ಮಾಡಿದ್ದು ನಿನ್ನ ಮೂರು ತಿಂಗಳ ತಾಳ್ಮೆ, ಮೌನ, ಬದಲಾದ ಮನೋಭಾವ ಅಷ್ಟೇ. ನೀನು ಯಾವ ದಿನ ಬಾಯಿಮುಚ್ಚಲು ಕಲಿತೆಯೋ ಆ ಕ್ಷಣವೇ ಬದಲಾವಣೆ ಕಾಲಿಟ್ಟಿತು. ನಿನ್ನ ತವರಿನಲ್ಲಿದ್ದ ತಾಯಿಯನ್ನು ಇಲ್ಲಿ ಕಾಣತೊಡಗಿದೆ. ಬದುಕು ಯಾವಾಗಲೂ ಕನ್ನಡಿಯಂತೆ. ನಮ್ಮ ಮನಸ್ಸಿನ ಪ್ರತಿಫಲವೇ ಅದು. ದ್ವೇಷ, ಮಾತ್ಸರ್ಯಕ್ಕೆ ಪ್ರೇಮ, ಸಹನೆಗಳೇ ಔಷಧಿ.

ಇದರಿಂದ ಹೊಸದಾಗಿ ಬಂದ ಸೊಸೆ ಮಗಳಂತೆ ಆದಳು. ಅತ್ತೆಯು ತಾಯಿಯಂತೆ ಆದಳು. ಸೊಸೆಗೆ ಜೀವನವೆಲ್ಲ ನರಕದ ಬದಲಾಗಿ ಸ್ವರ್ಗವೇ ಧರೆಗಿಳಿದು ಬಂದಂತೆ ಆಗಿತ್ತು. ಇಬ್ಬರಲ್ಲಿಯೂ ಹೊಂದಾಣಿಕೆ ನಂಬಲಾಗದಷ್ಟು ಬೇರೂರಿತ್ತು.

ಹೀಗೆ ಸೊಸೆಯಾದವಳು ಸಹನೆ, ಸೇವಾ ಮನೋಭಾವ, ನಗು ನಗುತ್ತ ಅತ್ತೆ, ಪತಿಯೊಡನೆ ಒಡನಾಟ ಎಲ್ಲವನ್ನೂ ರೂಢಿಸಿಕೊಂಡರೆ ಧರೆಯೇ ಸ್ವರ್ಗವಾಗುವುದರಲ್ಲಿ ಯಾವ ಸಂದೇಹವೂ ಇಲ್ಲ.

– ⊙ –

# ಪತಿ-ವಶೀಕರಣ ಉಪಾಯಗಳು

ಸಾಮಾನ್ಯವಾಗಿ ಪತ್ನಿಯಾದವಳು ಪತಿಯು ತನ್ನ ವಶವರ್ತಿಯಾಗಿರಬೇಕೆಂದು ಬಯಸುತ್ತಾಳೆ. ಅದಕ್ಕಾಗಿ ಅನೇಕ ರೀತಿಯ ಉಪಾಯಗಳನ್ನು ಮಾಡಲು ಇಚ್ಛಿಸುತ್ತಾಳೆ. ಆದರೆ ದ್ರೌಪದೀದೇವಿಯರು ಅನುಸರಿಸಿದ ಉಪಾಯಗಳು ಎಲ್ಲರಿಗೂ ಎಲ್ಲಕಾಲದಲ್ಲಿಯೂ ಮಾನ್ಯವೇ ಆಗಿವೆ. ಆ ಉಪಾಯಗಳೇನು ? ಎಂಬುದನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸಲಾಗಿದೆ.

ಧರ್ಮಿಷ್ಠರಾದ ಪಾಂಡವರು ವನವಾಸದಲ್ಲಿದ್ದಾಗ, ಶ್ರೀಕೃಷ್ಣನು ತನ್ನ ಪತ್ನಿ ಸತ್ಯಭಾಮಾದೇವಿಯನ್ನು ಕರೆದುಕೊಂಡು ಅವರ ಭೆಟ್ಟಿಗೆ ಬರುತ್ತಾನೆ. ಪಾಂಡವರ ಕ್ಷೇಮವನ್ನು ಶ್ರೀಕೃಷ್ಣ ವಿಚಾರಿಸುತ್ತ ಕುಳಿತಾಗ, ಸತ್ಯಭಾಮಾದೇವಿಯರು ದ್ರೌಪದಿಯ ಹತ್ತಿರ ಬಂದು ಲೋಕಶಿಕ್ಷಣಾರ್ಥವಾಗಿ ಕೆಲವು ಪ್ರಶ್ನೆಗಳನ್ನು ಕೇಳುತ್ತಾರೆ. ಅದಕ್ಕೆ ದ್ರೌಪದೀದೇವಿಯರು ಕೊಟ್ಟ ಮಾರ್ಮಿಕ ಉತ್ತರಗಳನ್ನು ಇಲ್ಲಿ ತಿಳಿಸಲಾಗಿದೆ.

ದ್ರೌಪದಿ ! ಮಹಾಪರಾಕ್ರಮಿಗಳಾದ, ಲೋಕಪಾಲಕರಂತೆ ಇರುವ ಪಾಂಡವರನ್ನು ನೀನು ಹೇಗೆ ವಶಮಾಡಿಕೊಂಡಿರುವಿ ? ನಿನ್ನಲ್ಲಿ ಅವರು ಕೋಪ ಮಾಡಿಕೊಳ್ಳುವದಿಲ್ಲ. ನೀನು ಹೇಳಿದಂತೆ ನಡೆದುಕೊಳ್ಳುತ್ತಾರೆ. ಯಾವ ಪ್ರಕ್ರಿಯೆಯಿಂದ ನಿನ್ನ ಅಧೀನರನ್ನಾಗಿ ಮಾಡಿಕೊಂಡಿರುವಿ ? ನಿನ್ನ ಮನಸ್ಸಿನಲ್ಲಿರುವುದನ್ನು ತಿಳಿದು ಅವರು ಕಾರ್ಯ ಮಾಡುತ್ತಾರೆ. ಹೀಗಿರುವಂತೆ ನೀನು ಮಾಡಿದ ಕಾರ್ಯ ರಹಸ್ಯವೇನು ತಿಳಿಸು.[೧]

ದ್ರೌಪದಿ ! ಪಾಂಡವರು ನಿನ್ನ ವಶವರ್ತಿಗಳಾಗುವದಕ್ಕೆ ವ್ರತ, ಉಪವಾಸ ಮಾಡಿದೆಯಾ ? ತಪಸ್ಸನ್ನು ಆಚರಿಸಿದೆಯಾ ? ಪವಿತ್ರ ತೀರ್ಥಗಳಲ್ಲಿ ಸ್ನಾನ

---

೧) ಕೇನ ದ್ರೌಪದಿ ವೃತ್ತೇನ ಪಾಂಡವಾನಧಿತಿಷ್ಠಸಿ ।
ಲೋಕ ಪಾಲೋಪಮಾನ್ ವೀರಾನ್ ಪುನಃ ಪರಮಸಂಹತಾನ್ ।
ಕಥಂ ಚ ವಶಗಾಸ್ತುಭ್ಯಂ ನ ಕುಪ್ಯಂತಿ ಚ ತೇ ಶುಭೇ ॥
ತವ ವಶ್ಯಾಹಿ ಸತತಂ ಪಾಂಡವಾಃ ಪ್ರಿಯದರ್ಶನೇ ।
ಮುಖ ಪ್ರೇಕ್ಷಾಶ್ಚ ತೇ ಸರ್ವೇ ತತ್ತ್ವಮೇತದ್ ಬ್ರವೀಹಿ ಮೇ ॥
ಶ್ರೀಮನ್ ಮಹಾಭಾರತ ವನಪರ್ವ

ಮಾಡಿದೆಯಾ ? ಯಾವ ಮಂತ್ರ ಬಲದಿಂದ ಇದನ್ನು ಸಾಧಿಸಿರುವಿ ? ಪತಿ ವಶೀಕರಣಕ್ಕಾಗಿ ಜಪ, ಹೋಮಗಳನ್ನು ಮಾಡಿದೆಯಾ ? ಮರೆಮಾಚದೇ ಹೇಳು.[೨]

ಪಾಂಡವರು ನಿನ್ನ ವಶವರ್ತಿಗಳಾಗಿರುವಂತೆ ಶ್ರೀಕೃಷ್ಣನು ನನ್ನ ವಶವರ್ತಿಯಾಗಬೇಕೆಂಬುದು ನನ್ನ ಇಚ್ಛೆಯಾಗಿದೆ.[೩]

ಸತ್ಯಭಾಮಾದೇವಿಯೇ ! ನೀತಿಗೆಟ್ಟ ಕೆಟ್ಟ ಸ್ತ್ರೀಯರು ಅನುಸರಿಸುವ ಮಾರ್ಗವದು. ನಾನು ಅಂತಹ ಕುಮಾರ್ಗದಿಂದ ಬಹುದೂರ ಇದ್ದೇನೆ.[೪]

ಪತ್ನಿಯು ತನ್ನನ್ನು ವಶಮಾಡಿಕೊಳ್ಳಲು ಮಂತ್ರ, ಔಷಧ, ಮೂಲಿಕೆಗಳನ್ನು ಪ್ರಯೋಗ ಮಾಡುವಳೆಂದು ತಿಳಿದೊಡನೆಯೇ ಗಂಡನಾದವನು ಅವಳ ವಿಷಯದಲ್ಲಿ ಮನೆಯನ್ನು ಹೊಕ್ಕ ಸರ್ಪದಿಂದ ಹೇಗೋ, ಹಾಗೆ ಭಯಪಡುತ್ತಾನೆ. ಅವನಲ್ಲಿ ಶಾಂತಿಯು ಹೊರಟು ಹೋಗುತ್ತದೆ.[೫]

ಮಂತ್ರ, ತಂತ್ರಗಳ ಪ್ರಕ್ರಿಯೆಯಿಂದ ಪತಿಯು ಖಂಡಿತವಾಗಿಯೂ ಪತ್ನಿಯ ವಶನಾಗುವದಿಲ್ಲ.[೬]

ಪಾಪಾತ್ಮರಾದ ಅಂತಹ ಸ್ತ್ರೀಯರು ಪತಿಯನ್ನು ವಶಪಡಿಸಿಕೊಳ್ಳಬೇಕೆಂಬ ದುರಾಸೆಯಿಂದ ತಮ್ಮ ಪತಿಗಳನ್ನು ಅನೇಕ ವಿಪತ್ತುಗಳಲ್ಲಿ ಸಿಕ್ಕಿ ಹಾಕುತ್ತಾರೆ. ಅನೇಕ ಕಷ್ಟಗಳಿಗೆ ಗುರಿ ಮಾಡುತ್ತಾರೆ.[೭]

ಹಾಗಾಗಿ ಏನು ಮಾಡುವುದರಿಂದ ಪತಿಗಳು ಪತ್ನಿಯ ವಶವರ್ತಿಗಳಾಗುತ್ತಾರೆ. ನಾನು ಅವರ ಜೊತೆ ಹೇಗೆ ನಡೆದುಕೊಳ್ಳುತ್ತೇನೆ, ಹೇಳುತ್ತೇನೆ ಕೇಳು-

ಗಂಡನಿಗೆ ಅಪ್ರಿಯವಾದ ಯಾವ ಕಾರ್ಯವನ್ನೂ ಹೆಂಡತಿಯು ಯಾವ ಕಾಲದಲ್ಲಿಯೂ ಮಾಡಬಾರದು.[೮]

---

೨) ವ್ರತಚರ್ಯಾ ತಪೋವಾಪಿ ಸ್ನಾನಮಂತ್ರೌಷಧಾನಿ ವಾ ।
ವಿದ್ಯಾವೀರ್ಯಂ ಮೂಲವೀರ್ಯಂ ಜಪಹೋಮಾಗದಾಸ್ತಥಾ ॥ ವನಪರ್ವ

೩) ಯೇನ ಕೃಷ್ಣೇ ಭವೇನ್ನಿತ್ಯಮ್ ಮಮಕೃಷ್ಣೋ ವಶಾನುಗಃ ॥ ,,

೪) ಅಸತ್‌ಸ್ತ್ರೀಣಾಂ ಸಮಾಚಾರಂ ಸತ್ಯೇಮಾಮನುಪೃಚ್ಛಸಿ ।
ಅಸದಾಚರಿತೇ ಮಾರ್ಗೇ ಕಥಂ ಸ್ಯಾದನುಕೀರ್ತನಮ್ ॥ ,,

೫) ಯದೈವ ಭರ್ತಾ ಜಾನೀಯಾತ್ ಮಂತ್ರಮೂಲ ಪರಾಂ ಸ್ತ್ರಿಯಮ್ ।
ಉದ್ವಿಜೇತ ತದೈವಾಸ್ಯಾಃ ಸರ್ಪಾದ್ವೇಶ್ಮಗತಾದಿವ ॥ ,,

೬) ನ ಜಾತು ವಶಗೋ ಭರ್ತಾ ಸ್ತ್ರಿಯಾಃ ಸ್ಯಾನ್ಮಂತ್ರ ಕರ್ಮಣಾ ॥ ,,

೭) ಪಾಪಾನುಗಾಸ್ತು ಪಾಪಾಸ್ತಾಃ ಪತೀನ್ ಉಪಸೃಜಂತ್ಯುತ ॥ ,,

೮) ನ ಜಾತು ವಿಪ್ರಿಯಂ ಭರ್ತುಃ ಸ್ತ್ರಿಯಾ ಕಾರ್ಯಂ ಕಥಂಚನ ॥ ,,

ನಾನು ಅಹಂಕಾರ, ಕಾಮ, ಕ್ರೋಧಗಳನ್ನು ಯಾವಾಗಲೂ ಬಿಟ್ಟವಳಾಗಿ ಪಾಂಡವರನ್ನು, ಅವರ ಇತರ ಪತ್ನಿಯರನ್ನು ಉಪಚರಿಸುತ್ತೇನೆ.[೯]

ನನ್ನ ಮನಸ್ಸಿನಲ್ಲಿರುವ ಅಪೇಕ್ಷೆಗಳನ್ನು ಸ್ಥಗಿತಗೊಳಿಸಿ ನನ್ನ ಮನಸ್ಸನ್ನು ಭಗವಂತನಲ್ಲಿಟ್ಟು, ಪತಿಶುಶ್ರೂಷಾನಿರತಳಾಗಿ, ಅಭಿಮಾನರಹಿತಳಾಗಿ, ನನ್ನ ಪತಿಗಳ ಮನಸ್ಸಿನ ಇಂಗಿತವನ್ನು ಅರಿತುಕೊಂಡು ಅವರ ಸೇವೆ ಮಾಡುತ್ತೇನೆ.[೧೦]

ಪತಿಗಳೊಡನೆ ಕೆಟ್ಟಮಾತುಗಳನ್ನಾಗಲೀ, ಸುಳ್ಳು ಮಾತುಗಳನ್ನಾಗಲೀ ಆಡುವದಿಲ್ಲ. ಅವರಿಗೆ ಸಂಶಯ ಉಂಟಾಗುವ ರೀತಿಯಲ್ಲಿ ಇನ್ನೊಬ್ಬರನ್ನು ನೋಡುವದಿಲ್ಲ. ಅವರ ಕಣ್ಣು ಸನ್ನೆಯಿಂದಲೇ ಅವರ ಮನಸ್ಸನ್ನು ತಿಳಿದುಕೊಂಡು ಅವರ ಸೇವೆ ಮಾಡುತ್ತೇನೆ.[೧೧]

ಸರ್ವಾಲಂಕಾರಭೂಷಿತನಾದ ದೇವತೆ ಇರಲಿ, ಮನುಷ್ಯನಿರಲಿ, ಗಂಧರ್ವನಿರಲಿ, ಯುವಕನಿರಲಿ, ಸರ್ವೈಶ್ವರ್ಯ ಸಂಪನ್ನನಿರಲಿ, ಸೌಂದರ್ಯವಂತನಾಗಿರಲಿ, ಅವನು ಅನ್ಯಪುರುಷನೆಂದು ತಿಳಿದು ಆ ಕಡೆಗೆ ನನ್ನ ಮನಸ್ಸು ಹಾಕುವದಿಲ್ಲ.[೧೨]

ನನ್ನ ಪತಿಗಳು ಸ್ನಾನ ಮಾಡಿದ ನಂತರ ನಾನು ಸ್ನಾನ ಮಾಡುತ್ತೇನೆ. ಅವರು ಊಟ ಮಾಡಿದ ನಂತರ ನಾನು ಊಟ ಮಾಡುತ್ತೇನೆ. ಅವರು ಮಲಗಿದ ಮೇಲೆ ನಾನು ಮಲಗುತ್ತೇನೆ. ಅವರು ಏಳುವ ಮೊದಲು ನಾನು ಏಳುತ್ತೇನೆ.[೧೩]

ಬೇರೆ ಕ್ಷೇತ್ರಗಳಿಂದಾಗಲೀ, ಅರಣ್ಯದಿಂದಾಗಲೀ, ಗ್ರಾಮಾಂತರದಿಂದಾಗಲೀ, ನನ್ನ ಪತಿಯು ಮನೆಗೆ ಆಗಮಿಸಿದಾಗ ಎದ್ದು ಹೋಗಿ ಮುಗುಳ್ನಗೆಯಿಂದ ಸ್ವಾಗತಿಸಿ ಆಸನವಿತ್ತು, ಕಾಲು ತೊಳೆಯಲು, ಕುಡಿಯಲು ನೀರು ಕೊಟ್ಟು ಉಪಚರಿಸುತ್ತೇನೆ. ಮತ್ತು ಅಭಿನಂದಿಸುತ್ತೇನೆ.[೧೪]

---

೯) ಅಹಂಕಾರಂ ವಿಹಾಯ ಅಹಂ ಕಾಮಕ್ರೋಧೌ ಚ ಸರ್ವದಾ ।
ಸದಾರಾನ್ ಪಾಂಡವಾನ್ನಿತ್ಯಂ ಪ್ರಯತೋಪಚರಾಮ್ಯಹಮ್ ॥ ವನಪರ್ವ

೧೦) ಪ್ರಣಯಂ ಪ್ರತಿಸಂಹೃತ್ಯ ನಿಧಾಯಾತ್ಮಾನಮಾತ್ಮನಿ ।
ಶುಶ್ರೂಷುರ್ನಿರಹಂಮಾನಾ ಪತೀನಾಂ ಚಿತ್ತರಕ್ಷಿಣೀ ॥ "

೧೧) ದುರ್ವ್ಯಾಹೃತಾತ್ ಶಂಕಮಾನಾ ದುಃಸ್ಥಿತಾದ್ದುರವೇಕ್ಷಿತಾತ್ ।
ದುರಾಸಿತಾತ್ ದುರ್ವ್ರಜಿತಾತ್ ಇಂಗಿತಾಧ್ಯಾಸಿತಾದಪಿ ॥ "

೧೨) ದೇವೋ ಮನುಷ್ಯೋ ಗಂಧರ್ವೋ ಯುವಾ ಚಾಪಿ ಸ್ವಲಂಕೃತಃ ।
ದ್ರವ್ಯವಾನಭಿರೂಪೋ ವಾ ನ ಮೇಽನ್ಯಃ ಪುರುಷೋ ಮತಃ ॥ "

೧೩) ನಾ ಭುಕ್ತವತಿ ನಾಸ್ನಾತೇ ನಾ ಸಂವಿಷ್ಟೇ ಚ ಭರ್ತರಿ ।
ನ ಸಂವಿಶಾಮಿ ನಾಶ್ನಾಮಿ ಸದಾ ಕರ್ಮ ಕರೇಷ್ವಪಿ ॥ "

೧೪) ಕ್ಷೇತ್ರಾತ್ ವನಾದ್ವಾ ಗ್ರಾಮಾದ್ವಾ ಭರ್ತಾರಂ ಗೃಹ ಮಾಗತಮ್ ।
ಅಭ್ಯುತ್ಥಾಯ ಅಭಿನಂದಾಮಿ ಆಸನೇನ ಉದಕೇನ ಚ ॥ "

ಮನೆಯಲ್ಲಿರುವ ಪಾತ್ರೆಗಳನ್ನು ಸ್ವಚ್ಛವಾಗಿಡುತ್ತೇನೆ. ರುಚಿ, ಶುಚಿಯಾಗಿರುವ ಮೃಷ್ಟಾನ್ನವನ್ನು ನನ್ನ ಪತಿಗಳಿಗೆ ಊಟ ಮಾಡಿಸುತ್ತೇನೆ. ಮನೆಯನ್ನು ಸ್ವಚ್ಛವಾಗಿಡುತ್ತೇನೆ.[೧೫]

ತಿರಸ್ಕಾರದ ಮಾತುಗಳನ್ನು ನನ್ನ ಪತಿಯೊಡನೆ ಆಡುವದಿಲ್ಲ. ದುಷ್ಟ ಸ್ತ್ರೀಯರ ಜೊತೆಗೆ ನಾನು ಹೋಗುವದಿಲ್ಲ. ಆಲಸ್ಯರಹಿತಳಾಗಿ ಪತಿ ಸೇವೆ ಮಾಡುತ್ತೇನೆ. ಅವರಿಗೆ ಅನುಕೂಲಕರಳಾಗಿ ಕೆಲಸ ಮಾಡುತ್ತ ಇರುತ್ತೇನೆ.[೧೬]

ಅಕಾಲದಲ್ಲಿ ಕಾರಣವಿಲ್ಲದೇ ನಗುವದಿಲ್ಲ. ಮನೆಯ ಬಾಗಿಲಲ್ಲಿ ಮತ್ತೆ ಮತ್ತೆ ಹೋಗಿ ನಿಲ್ಲುವದಿಲ್ಲ. ಮನೆಯ ತೋಟದಲ್ಲಿ ಹೆಚ್ಚು ಕಾಲ ಓಡಾಡುವದಿಲ್ಲ[೧೭] ನನ್ನ ಪತಿ ಬೇರೆ ಊರಿಗೆ ಹೋದಾಗ ಅವರು ಮರಳಿ ಬರುವವರೆಗೆ ನಾನು ಹೂಮುಡಿಯುವದಿಲ್ಲ, ಗಂಧ ಪೂಸಿಕೊಳ್ಳುವದಿಲ್ಲ. ಯಾವ ವಿಧ ಅಲಂಕಾರ ಮಾಡಿಕೊಳ್ಳುವದಿಲ್ಲ. ಪತಿಯ ಸುಖಾಗಮನವನ್ನು ಬಯಸುತ್ತಾ ವ್ರತಚಾರಿಣಿಯಾಗಿರುತ್ತೇನೆ.[೧೮]

ಯಾವ ಪಾನೀಯವನ್ನು ನನ್ನ ಪತಿ ವರ್ಜಿಸುವನೋ, ಯಾವ ಆಹಾರವನ್ನು ನನ್ನ ಪತಿ ಸೇವಿಸುವದಿಲ್ಲವೋ. ಯಾವ ವಸ್ತುವಿನ ಸುಖವನ್ನು ನನ್ನ ಪತಿ ವರ್ಜಿಸುವನೋ, ಆ ಎಲ್ಲವನ್ನು ನಾನು ಸಹ ವರ್ಜಿಸುತ್ತೇನೆ.[೧೯]

ಪತಿಯ ಆಶ್ರಯದಲ್ಲಿರುವುದು, ಪತಿಶುಶ್ರೂಷಣೆ ಮಾಡುವದು, ಪತ್ನಿಯ ಮುಖ್ಯ ಧರ್ಮ. ಅದೇ ಸನಾತನ ಧರ್ಮ. ಪತಿಯೇ ದೇವರು, ಅವನೇ ಗತಿ, ಅಂತಹ ಪತಿಯ ವಿಷಯದಲ್ಲಿ ಅಪ್ರಿಯವಾದ ಕಾರ್ಯ ಮಾಡಲು ಯಾವಳು ಇಚ್ಛಿಸುತ್ತಾಳೆ ?[೨೦]

---

೧೫) ಪ್ರಮೃಷ್ಟಭಾಂಡಾ ಮೃಷ್ಟಾನ್ನಾ ಕಾಲೇ ಭೋಜನದಾಯಿನೀ ॥ ವನಪರ್ವ

೧೬) ಅತಿರಸ್ಕೃತ ಸಂಭಾಷಾ ದುಃಸ್ತ್ರಿಯೋ ನಾನು ಸೇವತೀ ।
ಅನುಕೂಲವತೀ ನಿತ್ಯಂ ಭವಾಮಿ ಅನಲಸಾ ಸಹಾ ॥ "

೧೭) ಅನರ್ಮಚಾಪಿ ಹಸಿತಂ ದ್ವಾರಿಸ್ಥಾನಮಭೀಕ್ಷ್ಣಶಃ ।
ಅವಸ್ಕರೇ ಚಿರಸ್ಥಾನಂ ನಿಷ್ಕುಟೇಷು ಚ ವರ್ಜಯೇ ॥ "

೧೮) ಯದಾ ಪ್ರವಸತೇ ಭರ್ತಾ ಕುಟುಂಬಾರ್ಥೇನ ಕೇನಚಿತ್ ।
ಸುಮನೋವರ್ಣಕಾಪೇತಾ ಭವಾಮಿ ವ್ರತಚಾರಿಣಿ ॥ "

೧೯) ಯಚ್ಚ ಭರ್ತಾ ನ ಪಿಬತಿ ಯಚ್ಚ ಭರ್ತಾ ನ ಸೇವತೇ ।
ಯಚ್ಚ ನಾಶ್ನಾತಿ ಮೇ ಭರ್ತಾ ಸರ್ವಂ ತದ್ವರ್ಜಯಾಮ್ಯಹಮ್ ॥ "

೨೦) ಪತ್ಯಾಶ್ರಯೋ ಹಿ ಮೇ ಧರ್ಮೋ ಮತಃ ಸ್ತ್ರೀಣಾಂ ಸನಾತನಃ ।
ಸ ದೇವಃ ಸಾ ಗತಿರ್ನಾನ್ಯಾ ತಸ್ಯ ಕಾ ವಿಪ್ರಿಯಂ ಚರೇತ್ ॥ "

ನನ್ನ ಪತಿಯ ಆಜ್ಞೆಯಂತೆ ನಾನು ಯಾವಾಗಲೂ ನಡೆದುಕೊಳ್ಳುತ್ತೇನೆ. ಪತಿಯ ಮನಸ್ಸಿಗೆ ಆಹ್ಲಾದವನ್ನುಂಟು ಮಾಡಲು ನಾನು ಅಲಂಕಾರ ಮಾಡಿಕೊಳ್ಳುತ್ತೇನೆ. ಸರ್ವದಾ ಅವರಿಗೆ ಪ್ರಿಯವಾಗುವ ಕಾರ್ಯವನ್ನೇ ಮಾಡುವುದರಲ್ಲಿ ನಿರತಳಾಗಿರುತ್ತೇನೆ.[೨೧]

ವೀರಮಾತೆಯಾದ, ಸತ್ಯವಾದಿನಿಯಾದ, ಹಿರಿಯಳಾದ, ಅತ್ತೆ ಕುಂತೀದೇವಿಯನ್ನು ಸ್ನಾನ, ಪಾನ, ಭೋಜನ, ವಸ್ತ್ರಾದಿಗಳಿಂದ ದಿನವೂ ನಾನೇ ಉಪಚರಿಸುತ್ತೇನೆ.[೨೨]

ಸಾವಧಾನದಿಂದ ವಿನೀತಳಾಗಿ ಅನುದಿನ ನಾನು ಅವರ ಸೇವೆಯನ್ನು ಮಾಡುವುದರಿಂದ, ಹಿರಿಯರ ಶುಶ್ರೂಷೆ ಮಾಡುವುದರಿಂದ ನನ್ನ ಪತಿಗಳು ನನ್ನ ವಶವರ್ತಿಗಳಾಗಿದ್ದಾರೆ.[೨೩]

ನಾನು ಎಲ್ಲರಿಗಿಂತ ಮೊದಲು ಏಳುತ್ತೇನೆ. ಎಲ್ಲರೂ ಮಲಗಿದ ನಂತರವೇ ಮಲಗುತ್ತೇನೆ. ಈ ರೀತಿ ಹಗಲಿನಲ್ಲಿ, ರಾತ್ರಿಯಲ್ಲಿ ನನ್ನ ಸುಖ ಬದಿಗೊತ್ತಿ ಪತಿಸೇವಾನಿರತಳಾಗಿರುವುದೇ ನನ್ನ ಪತಿಗಳು ನನಗೆ ವಶವಾಗಿರಲು ಮುಖ್ಯ ಕಾರಣವಾಗಿದೆ.[೨೪]

ದ್ರೌಪದೀದೇವಿಯರು ಇಲ್ಲಿ ತಿಳಿಸಿದಂತೆ ಪತಿ ಸೇವೆ ಮಾಡಿ ಎಲ್ಲ ಸಾಧ್ವೀಮಣಿಗಳು ತಮ್ಮ ಪತಿಗಳು ತಮ್ಮ ವಶವರ್ತಿಯಾಗುವಂತೆ ಮಾಡಿಕೊಳ್ಳಬೇಕು.



---

೨೧) ಯಥೋಪದೇಶಂ ನಿಯತಾ ವರ್ತಮಾನಾ ವರಾಂಗನೇ ।
ಸ್ವಲಂಕೃತಾ ಸುಪ್ರಯತಾ ಭರ್ತುಃ ಪ್ರಿಯಹಿತೇ ರತಾ ॥ ವನಪರ್ವ

೨೨) ನಿತ್ಯಮಾರ್ಯಾಂ ಅಹಂ ಕುಂತೀಂ ವೀರಸೂಂ ಸತ್ಯವಾದಿನೀಮ್ ।
ಸ್ವಯಂ ಪರಿಚರಾಮ್ಯೇತಾಂ ಪಾನಾಚ್ಛಾದನ ಭೋಜನೈಃ ॥ ''

೨೩) ಅವಧಾನೇನ ಸುಭಗೇ ನಿತ್ಯೋತ್ಥಿತ ತಯೈವ ಚ ।
ಭರ್ತಾರೋ ವಶಗಾ ಮಹ್ಯಂ ಗುರುಶುಶ್ರೂಷಯೈವ ಚ ॥ ''

೨೪) ಪ್ರಥಮಂ ಪ್ರತಿಬುಧ್ಯಾಮಿ ಚರಮಂ ಸಂವಿಶಾಮಿ ಚ ।
ನಿತ್ಯಕಾಲಮಹಂ ಸತ್ಯೇ ಏತತ್ ಸಂವನನಂ ಮಮ ॥ ''

# ದಾಂಪತ್ಯದ ಕುರಿತು ಕಿವಿಮಾತು

ವಿವಾಹದ ನಂತರ ಪತಿ ಪತ್ನಿಯರು ಅನ್ಯೋನ್ಯತೆಯಿಂದ, ಪ್ರೀತಿಯಿಂದ ವೈವಾಹಿಕ ಜೀವನವನ್ನು ನಡೆಸಬೇಕು.

ಪತ್ನಿಯಿಂದ ಪತಿಯೂ, ಪತಿಯಿಂದ ಪತ್ನಿಯೂ ತೃಪ್ತಿಯನ್ನು ಕಾಣುವ ಸಂಸಾರದಲ್ಲಿ, ದಾಂಪತ್ಯದಲ್ಲಿ ಸದಾ ಸುಖ, ಶಾಂತಿಗಳು ನೆಲೆಸುತ್ತವೆ.[೧]

ಸ್ತ್ರೀಗೆ ತಮ್ಮ ಪತಿಯನ್ನೇ ಸೇರುವುದು ವ್ರತವು, ಹಾಗೆಯೇ ಪುರುಷನಿಗೆ ತನ್ನ ಸ್ವಪತ್ನಿಯನ್ನೇ ಸೇರುವ ವ್ರತವು ಧರ್ಮವಾಗಿರುತ್ತದೆ.[೨]

ಪತ್ನಿಯು ಮೆಚ್ಚುವಂತೆ ಪತಿಯು ವರ್ತಿಸದಿದ್ದರೆ ಮತ್ತು ಪತಿಯು ಪತ್ನಿಯ ಮನಸ್ಸಿಗೆ ಹಿತಕರವಾಗಿ ವರ್ತಿಸದಿದ್ದರೆ, ಗರ್ಭೋತ್ಪತ್ತಿ ಹಾಗೂ ಸಂತತಿಯ ಮೇಲೆ ಪರಿಣಾಮವಾಗುತ್ತದೆ, ಒಳ್ಳೆಯ ಸಂತತಿಯು ಉತ್ಪನ್ನವಾಗುವದಿಲ್ಲ.[೩]

ಪತಿ ಪತ್ನಿ ಸಂಬಂಧವು ದೈವ ಕಲ್ಪಿತವೇ ಸರಿ. ಇದರಲ್ಲಿ ಸ್ವೇಚ್ಛೆಯು ಸಲ್ಲುವದಿಲ್ಲ. ಪತಿಯಾದವನು ಕೈಹಿಡಿದ ಪತ್ನಿಯನ್ನು ಪೋಷಿಸಲೇಬೇಕು ಆಗ ಮಾತ್ರ ದೇವತೆಗಳ ಒಲುಮೆ ಸಿಕ್ಕುವುದು ಸಾಧ್ಯ.[೪]

ದಾಂಪತ್ಯ ವಿಷಯದಲ್ಲಿ ಸ್ತ್ರೀಪುರುಷರಿಗೆ ಸಮಾನ ಕರ್ತವ್ಯವಿದೆ. ಇಬ್ಬರೂ ಒಂದು ಉದ್ದೇಶವನ್ನು ಈಡೇರಿಸಲು ಒಂದೆಡೆ ಸೇರಿರುತ್ತಾರೆ. ಗರ್ಭಧಾರಣೆಗಾಗಿ ಸ್ತ್ರೀ ಸೃಷ್ಟಿ. ಗರ್ಭೋತ್ಪತ್ತಿಗಾಗಿ ಪುರುಷ ಸೃಷ್ಟಿ ಎಂದು ತಿಳಿದಿರಬೇಕು. ಪತಿ ಪತ್ನಿಯರ ಬಾಂಧವ್ಯದ

---

೧) ಸಂತುಷ್ಟೋ ಭಾರ್ಯಯಾ ಭರ್ತಾ ಭರ್ತ್ರಾಭಾರ್ಯಾತಥೈವ ಚ ।
ಯಸ್ಮಿನ್ನೇವ ಕುಲೇ ನಿತ್ಯಂ ಕಲ್ಯಾಣಂ ತತ್ರ ವೈಧ್ರುವಮ್ ॥ (ಮನುಸ್ಮೃತಿ ೩-೬೦)

೨) ಸ್ವೀಯ ಪುನ್ನಿಯತಿಃ ಸ್ತ್ರೀಣಾಂ ಸ್ವದಾರ ನಿಯತಿರ್ನೃಣಾಮ್ ॥
ಶ್ರೀಮನ್‌ಮಹಾಭಾರತ (ಶಾ. ನಿ) (೨೯-೩೫)

೩) ಯದಿ ಹಿ ಸ್ತ್ರೀ ನ ರೋಚೇತ ಪುಮಾಂಸಂ ನ ಪ್ರಮೋದಯೇತ್ ।
ಅಪ್ರಮೋದಾತ್ ಪುನಃ ಪುಂಸಃ ಪ್ರಜನಂ ನ ಪ್ರವರ್ತತೆ ॥ (ಮನುಸ್ಮೃತಿ ೩-೬೧)

೪) ದೇವದತ್ತಾಂ ಪತಿರ್ಭಾರ್ಯಾಂ ವಿಂದತೇ ನೇಚ್ಛಯಾತ್ಮನಃ ।
ತಾಂ ಸಾಧ್ವೀಂ ಬಿಭೃಯಾನ್ನಿತ್ಯಂ ದೇವಾನಾಂ ಪ್ರಿಯಮಾಚರನ್ ॥
(ಮನುಸ್ಮೃತಿ ೯-೯೫)

ಒಸುಗೆಯನ್ನು ಬೆಸುಗೆ ಹಾಕುವದೇ ಪ್ರಜಾತಂತು. ಈ ದಿಶೆಯಲ್ಲಿ ಇಬ್ಬರೂ ಸಮಾನರೇ ಸರಿ. ದಾಂಪತ್ಯದಲ್ಲಿ ಒಬ್ಬರು ಇನ್ನೊಬ್ಬರ ಮೇಲೆ ದಬ್ಬಾಳಿಕೆಯನ್ನು ನಡೆಸಿದರೆ, ಸ್ವಭಾವ ಮೃದುಲವಾದ ಈ ಬಾಂಧವ್ಯದಲ್ಲಿ ಬಿರುಕು ಇಣುಕು ಹಾಕುತ್ತದೆ.

ಕಾಯೇನ ವಾಚಾ, ಮನಸಾ ಒಬ್ಬರು ಇನ್ನೊಬ್ಬರನ್ನು ಅತಿಕ್ರಮಿಸಬಾರದು. ಇದೇ ದಾಂಪತ್ಯ ಧರ್ಮವು. ಇದೇ ಸುಖೀ ದಾಂಪತ್ಯದ ಮರ್ಮವು ಕೂಡ. ಈ ರೀತಿಯ ವರ್ತನೆಯು ಆಮರಣಾಂತಿಕವಾಗಿ ಸ್ಥಿರವಾಗಿ ಇರಬೇಕು.[೫]

ಪತಿಯಾದವನು ಪತ್ನಿಯನ್ನು ತನ್ನ ಸಾಮರ್ಥ್ಯ, ಪ್ರೀತಿ, ವಿಶ್ವಾಸಗಳಿಂದಲೇ ಗೆಲ್ಲಬೇಕು. ಪತಿ ಪತ್ನೀ ಸಂಬಂಧದಲ್ಲಿ ಪುರುಷನ ದೌರ್ಜನ್ಯ, ದಬ್ಬಾಳಿಕೆ ಇರಕೂಡದು. ತನ್ನ ಸ್ತ್ರೀಯನ್ನು ಒಲಿಸಿಕೊಂಡು ಅವಳನ್ನು ತನ್ನವಳನ್ನಾಗಿ ಮಾಡಿಕೊಳ್ಳಬೇಕು.

ದಾಂಪತ್ಯದಲ್ಲಿ ನಡೆಯುವ ಸ್ತ್ರೀಪುರುಷ ಸಮಾಗಮವನ್ನು- "ವಾಮದೇವ ಯಜ್ಞ"ವೆಂದು ಪರಿಗಣಿಸಲಾಗಿದೆ.

ಮಹಿದಾಸರೂಪೀ ಭಗವಂತನು ತನ್ನ ಶಿಷ್ಯರನ್ನು ಕುರಿತು– ಉಪದೇಶಿಸಿದ ಕೆಲವೊಂದು ಮಾತುಗಳನ್ನು ಸ್ತ್ರೀಪುರುಷ ಇಬ್ಬರೂ ಗಮನದಲ್ಲಿಡಬೇಕು.

ಲೋಕದಲ್ಲಿ ಸ್ತ್ರೀಯರ ಶೋಣಿತದಲ್ಲಿ ಅಗ್ನ್ಯಂತರ್ಗತ ಸ್ತ್ರೀರೂಪೀ ಜನಾರ್ದನನಿರುತ್ತಾನೆ. ಅವನು ಜ್ವಲಿಸುವ ಜ್ವಾಲೆಯಂಥ ಪ್ರಭೆ ಉಳ್ಳವನು. ಅಗ್ನಿನಾಮಕನು. ಆದ್ದರಿಂದ ವಿಷ್ಣುವಿನ ಸನ್ನಿಧಾನವಿರುವುದರಿಂದ ಪತ್ನಿಯ ಶರೀರದಲ್ಲಿರುವ ಶೋಣಿತದ ವಿಷಯದಲ್ಲಿ ಅಸಹ್ಯಪಟ್ಟುಕೊಳ್ಳಬಾರದು. ಹಾಗೆಯೇ ಲೋಕದಲ್ಲಿ ಪುರುಷರ ರೇತಸ್ಸಿನಲ್ಲಿ ಆದಿತ್ಯಾಂತರ್ಗತ ವಿಷ್ಣು ಇರುತ್ತಾನೆ. ಅವನು ಪ್ರಪಂಚಕ್ಕೆ ಆದಿಯಾದುದರಿಂದ ಆದಿತ್ಯನಾಮಕ. ಮಿಂಚಿನಂತೆ ಹೊಳೆಯುವ ಪುರುಷರೂಪಿಯಾದ ಈ ಭಗವಾನ್ ವಿಷ್ಣುವು ರೇತಸ್ಸಿನಲ್ಲಿರುವುದರಿಂದ ಪತಿಯಲ್ಲಿರುವ ರೇತಸ್ಸಿನ ಬಗ್ಗೆ ಪತ್ನಿಯೂ ಅಸಹ್ಯಪಟ್ಟುಕೊಳ್ಳಬಾರದು.[೬]

---

೫) ಅನ್ಯೋನ್ಯಸ್ಯಾವ್ಯಭಿಚಾರೋ ಭವೇದಾಮರಣಾಂತಿಕಃ ।
ಏಷ ಧರ್ಮಃ ಸಮಾಸೇನ ಜ್ಞೇಯಃ ಸ್ತ್ರೀಪುಂಸಯೋಃ ಪರಃ ॥ (ಮನುಸ್ಮೃತಿ ೯-೧೦೧)

೬) ಸ್ತ್ರೀಷು ಯಲ್ಲೋಹಿತಂ ಲೋಕೇ ತತ್ರಾಗ್ನಿಸ್ಥೋ ಜನಾರ್ದನಃ ।
ಸ್ತ್ರೀರೂಪಃ ಸೋಽಗ್ನಿನಾಮ್ನೈವ ಜ್ವಲಜ್ಜ್ವಾಲಾ ಸಮಪ್ರಭಃ ।
ತಸ್ಮಾತ್ ವಿಷ್ಣೋಃ ಸನ್ನಿಧಾನಾತ್ ಭರ್ತಾ ಭಾರ್ಯಾಶರೀರಗಾತ್ ।
ನ ಬೀಭತ್ಸೇತೈವ ರಕ್ತಾತ್ ತಥಾ ಪುಂರೇತಸಿ ಸ್ಥಿತಃ ॥
ಆದಿತ್ಯೇ ಸಂಸ್ಥಿತೋ ವಿಷ್ಣುರಾದೇರಾದಿತ್ಯನಾಮಕಃ ।
ತಸ್ಮಾನ್ನ ರೇತಸೋ ಭಾರ್ಯಾ ಬೀಭತ್ಸೇತ ಪತಿಸ್ಥಿತಾತ್
ಪುಂರೂಪೋ ಭಗವಾನ್ ವಿಷ್ಣೂ ರೇತಸಿಸ್ಥೋದ್ಯುಮತ್ಪ್ರಭಃ ॥
ಶ್ರೀ ಮಹೈತರೇಯೋಪನಿಷದ್‌ಭಾಷ್ಯ

ಸ್ತ್ರೀಯರಲ್ಲಿ ಋತುಮತಿಯಾದ ಸ್ತ್ರೀಯು ಪುತ್ರವತಿಯಾಗಿ ಯಶಸ್ಸನ್ನು ಹೊಂದಬಲ್ಲಳು. ಆದ್ದರಿಂದ ಋತುಮತಿಯಾಗಿ ಶುದ್ಧಸ್ನಾನವನ್ನು ಮಾಡಿದ ಅಂಥ ಪತ್ನಿ (ಸ್ತ್ರೀ)ಯನ್ನು ಸಮೀಪಿಸಿ ಒಳ್ಳೆಯ ಸಂತತಿ ಪಡೆಯುವ ಬಗ್ಗೆ ವಿಚಾರ ಮಾಡಬೇಕು.[೭]

ತನ್ನ ಪತ್ನಿ ಗರ್ಭವನ್ನು ಧರಿಸಬೇಕೆಂದು ಪತಿ ಬಯಸುವದಾದರೆ ಅವಳೊಡನೆ ಕೂಡುವಾಗ ಮುಖಕ್ಕೆ ಮುಖವನ್ನು ಜೋಡಿಸಿ ಶ್ವಾಸವನ್ನು ತೆಗೆದುಕೊಂಡು ಅನಂತರ ಶ್ವಾಸವನ್ನು ಬಿಡಬೇಕು. "ನನ್ನ ರೇತಸ್ಸಿಗೆ ಕಾರಣವಾದ ಇಂದ್ರಿಯದಿಂದ ನಿನಗೆ ಸಂತಾನಶಕ್ತಿಯನ್ನು ಕೊಡುತ್ತೇನೆ" ಎಂದು ಹೇಳಬೇಕು. ಆದರಿಂದ ಅವಳು ಗರ್ಭಿಣಿಯೇ ಆಗುತ್ತಾಳೆ.[೮]

ಹೀಗೆ ಮಾಡುವಾಗ ಇಲ್ಲಿ ಹೇಳಿದ ಅನುಸಂಧಾನವನ್ನು ಮನಸ್ಸಿನಲ್ಲಿಟ್ಟುಕೊಂಡಿರಬೇಕಾದುದು ಅವಶ್ಯ.

ಪ್ರಜಾಪತಿ ನಾಮಕ ಭಗವಂತನು ಪ್ರಜಾಸೃಷ್ಟಿ ನಡೆಸಲು ಮಾಧ್ಯಮರನ್ನಾಗಿ ಪ್ರಾಣದೇವರನ್ನೂ, ಭಾರತೀದೇವಿಯನ್ನೂ ಸೃಷ್ಟಿಸಿದ್ದು, ಹಗಲು-ರಾತ್ರಿಗಳನ್ನೊಳಗೊಂಡ ಸಮಗ್ರ ದಿನದಲ್ಲಿ ಅಂತಹ ಭಗವಂತನಿದ್ದರೆ, ಹಗಲಿನಲ್ಲಿ ಪ್ರಾಣನೂ, ರಾತ್ರಿಯಲ್ಲಿ ಭಾರತೀದೇವಿಯರೂ ಇರುತ್ತಾರೆ.

ಹಾಗೆಯೇ ದಂಪತಿಗಳಲ್ಲಿ ಭಗವಂತನ ಸನ್ನಿಧಾನವಿದೆ. ಭಾರ್ಯೆಯಲ್ಲಿ ಭಾರತಿಯೂ, ಭರ್ತೃವಿನಲ್ಲಿ ಪ್ರಾಣನೂ ಇದ್ದಾರೆ. ಪ್ರಜಾಪತಿನಾಮಕ ಭಗವಂತನು ರಾತ್ರಿಯಲ್ಲಿ ಪ್ರಾಣ, ಭಾರತಿಯರ ಸನ್ನಿಧಾನಕ್ಕೆ ಪಾತ್ರರಾದ ದಂಪತಿಗಳ ಮೂಲಕ ಸೃಷ್ಟಿಕಾರ್ಯವನ್ನು ನಡೆಸುವನು. ಈ ರೀತಿಯಾಗಿ ಸ್ತ್ರೀಪುರುಷರ ಸಂಬಂಧದಲ್ಲಿರುವ ವಿಶೇಷವನ್ನು ತಿಳಿದವನು ಸಂಸಾರದಿಂದ ಮುಕ್ತನಾಗುತ್ತಾನೆ ಎಂಬುದಾಗಿ ಪ್ರಜಾಪತಿ ಸಂಹಿತೆಯಲ್ಲಿ ಹೇಳಲಾಗಿದೆ.[೯]

---

೭) ಶ್ರೀರ್ಹವಾ ಏಷಾ ಸ್ತ್ರೀಣಾಂ ಯನ್ಮಲೋದ್ವಾಸಾಃ ।
ತಸ್ಮಾನ್ಮಲೋದ್ವಾಸಸಂ ಯಶಸ್ವಿನೀಮಭಿಕ್ರಮ್ಯೋಪಮಂತ್ರಯೇತ್ ॥
ಶ್ರೀ ಬೃಹದಾರಣ್ಯಕೋಪನಿಷತ್

೮) ಅಥ ಯಾಮಿಚ್ಛೇತ್ ಗರ್ಭಂ ದಧಿತೇತಿ ತಸ್ಯಾಮರ್ಥಂ ನಿಷ್ಠಾಯ ಮುಖೇನಮುಖಂ–
ಸಂಧಾಯಾಪಾನ್ಯಾಭಿಪ್ರಾಣ್ಯಾತ್ ಇಂದ್ರಿಯೇಣ ತೇ ರೇತಸಾ ರೇತ ಆದಧಾಮೀತಿ ।
ಗರ್ಭಿಣ್ಯೇವ ಭವತಿ ॥ ಶ್ರೀ ಬೃಹದಾರಣ್ಯಕೋಪನಿಷತ್

೯) ಅಹೋರಾತ್ರೇ ತು ಭಗವಾನ್ ಪ್ರಾಣೋ ಹ್ಯಹನಿ ವಾಙ್ನಿಶಿ ।
ದಂಪತ್ಯೋರ್ಭಗವಾನ್ ವಿಷ್ಣುಃ ಭಾರ್ಯಾಸ್ಥಾ ತು ಸರಸ್ವತೀ ।
ಭರ್ತೃಸ್ಥಃ ಸ ಸ್ವಯಂ ವಾಯುಃ ಏವಂ ಜಾನನ್ ವಿಮುಚ್ಯತೇ ॥
(ಷಟ್‌ಪ್ರಶ್ನೋಪನಿಷತ್ ಭಾಷ್ಯ- ಪ್ರಜಾಪತಿಸಂಹಿತೆ)

ಹೀಗೆ ಹಗಲಿನಲ್ಲಿ ಪತಿಯಲ್ಲಿ ಪ್ರಾಣದೇವನ ಸನ್ನಿಧಾನವನ್ನೂ, ರಾತ್ರಿಯಲ್ಲಿ ಪತ್ನಿಯಲ್ಲಿ ಭಾರತೀದೇವಿಯ ಸನ್ನಿಧಾನವನ್ನು ತಿಳಿಸಿಕೊಟ್ಟ ಷಟ್‌ಪ್ರಶ್ನಉಪನಿಷತ್ತು – ಹಗಲಿನಲ್ಲಿ ಪತಿ, ಪತ್ನಿಯರು ಸಮಾಗಮ ಮಾಡಕೂಡದು ಎಂಬುದಾಗಿ ಸೂಚ್ಯವಾಗಿ ತಿಳಿಸುತ್ತದೆ.

ರಾತ್ರಿ ಪತ್ನಿಯಲ್ಲಿ ಭಾರತೀದೇವಿಯ ಸನ್ನಿಧಾನವಿರುವ ಪ್ರಯುಕ್ತ ದಂಪತಿಗಳು ಸಮಾಗಮ ನಡೆಸಿದರೆ ಭಾರತೀ ಪ್ರಾಣದೇವರ ಸಮಾಗಮ ನಡೆಸಿದಂತೆ ಆಗುತ್ತದೆ. ಆದ್ದರಿಂದಲೇ ರಾತ್ರಿಕಾಲದ ಸಮಾಗಮ ಬ್ರಹ್ಮಚರ್ಯಕ್ಕೆ ಸಮಾನವಾದುದೆಂದು ಹೇಳುತ್ತಾರೆ.[೧೦]

ತನ್ನ ಒಬ್ಬಳೇ ಪತ್ನಿಯ ಋತುಕಾಲದಲ್ಲಷ್ಟೇ ಸಮಾಗಮ ನಡೆಸುವದು ಪ್ರಾಜಾಪತ್ಯ ಬ್ರಹ್ಮಚರ್ಯವೆನಿಸುವದೆಂದು "ವ್ಯಾಸಸ್ಮೃತಿ" ವಚನವಿದೆ. ಇದರಿಂದ ಸ್ತ್ರೀ ಪುರುಷರ ಸಮಾಗಮ ಋತುಕಾಲದಲ್ಲಿ ನಡೆಯಬೇಕೆಂದು ಸೂಚಿತವಾಗುತ್ತದೆ.[೧೧]

ಅಭೀಷ್ಟ ಪುತ್ರ ಪ್ರಾಪ್ತಿಗೆ ಶ್ರೀ ಬೃಹದಾರಣ್ಯಕೋಪನಿಷತ್ತಿನಲ್ಲಿ ಕೆಲವೊಂದು ಉಪಾಯಗಳನ್ನು ತಿಳಿಸಿದ್ದಾರೆ ಅವು ಹೀಗಿವೆ :

ನನಗೆ ಶುದ್ಧ ಬೆಳ್ಳಗಿನ, ಒಂದು ವೇದ ಅಧ್ಯಯನ ಮಾಡುವ, ಪೂರ್ಣಾಯುಷ್ಯ ಉಳ್ಳ ಪುತ್ರನು ಜನಿಸಲಿ ಎಂದು ಇಚ್ಛಿಸುವ ಪುರುಷನು ಕ್ಷೀರಾನ್ನವನ್ನು ಬೇಯಿಸಿ ಹೋಮ ಮಾಡಬೇಕು. ತುಪ್ಪದಿಂದ ಕೂಡಿದ ಆ ಹೋಮ ಶೇಷವನ್ನು ದಂಪತಿಗಳು ಭಕ್ಷಿಸಬೇಕು.[೧೨]

ನನಗೆ ಕಂದುಗಣ್ಣಿನ ಕೆಂಪುಬಣ್ಣದ, ಎರಡು ವೇದಗಳನ್ನು ಅಧ್ಯಯನ ಮಾಡುವ, ಪೂರ್ಣಾಯುಷ್ಯವುಳ್ಳ ಪುತ್ರನು ಜನಿಸಲಿ ಎಂದು ಇಚ್ಛಿಸುವ ಪುರುಷನು ಮೊಸರನ್ನವನ್ನು

---

೧೦) ಪ್ರಾಣಂ ವಾ ಏತೇ ಪ್ರಸ್ಕಂದಂತಿ ಯೇದಿವಾ ರತ್ಯಾ ಸಂಯುಜ್ಯಂತೇ ।
ಬ್ರಹ್ಮಚರ್ಯಮೇವ ತದ್ಯದ್ರಾತ್ರೌ ರತ್ಯಾ ಸಂಯುಜ್ಯಂತೇ ॥
(ಷಟ್‌ಪ್ರಶ್ನಉಪನಿಷತ್ ೧-೩-೨)

೧೧) ಪ್ರಾಜಾಪತ್ಯ ಬ್ರಹ್ಮಚರ್ಯಮೇಕಭಾರ್ಯರ್ತುಗಾಮಿತಾ ॥
(ವ್ಯಾಸಸ್ಮೃತಿ, ಭಾಗ.ತಾ.ನಿ- ೩-೧೩-೪೨)

೧೨) ಸ ಯ ಇಚ್ಛೇತ್ ಪುತ್ರೋ ಮೇ ಶುಕ್ಲೋ ಗೌರೋ ಜಾಯೇತ
ವೇದಮನುಬ್ರುವೀತ ಸರ್ವಮಾಯುರಿಯಾದಿತಿ ಕ್ಷೀರೌದನಂ ಪಾಚಯಿತ್ವಾ
ಸರ್ಪಿಷ್ಮಂತಮಶ್ನೀಯಾತಾಂ ॥ ಈಶ್ವರೌ ಜನಯಿತವೈ ॥
ಶ್ರೀ ಬೃಹದಾರಣ್ಯಕೋಪನಿಷತ್

ಬೇಯಿಸಿ ಹೋಮ ಮಾಡಬೇಕು. ಹೋಮ ಶೇಷವನ್ನು ಆಜ್ಯಸಹಿತವಾಗಿ ದಂಪತಿಗಳು ಭೋಜನ ಮಾಡಬೇಕು.[೧೩]

ನನಗೆ ಕೆಂಪು ಕಣ್ಣುಳ್ಳ ಶ್ಯಾಮವರ್ಣದ, ಮೂರು ವೇದಗಳನ್ನು ಅಧ್ಯಯನ ಮಾಡುವ ಪೂರ್ಣಾಯುಷ್ಯವುಳ್ಳ ಪುತ್ರನು ಜನಿಸಲಿ ಎಂದು ಇಚ್ಛಿಸುವ ಪುರುಷನು ನೀರಿನಲ್ಲಿ ಅನ್ನವನ್ನು ಬೇಯಿಸಿ ಹೋಮ ಮಾಡಬೇಕು. ಆಗ ಆ ದಂಪತಿಗಳು ಅಂತಹ ಪುತ್ರನನ್ನು ಪಡೆಯಲು ಸಮರ್ಥರಾಗುತ್ತಾರೆ.[೧೪]

ನನಗೆ ಪಂಡಿತಳಾದ, ಪೂರ್ಣಾಯುಷ್ಯವುಳ್ಳ ಮಗಳು ಜನಿಸಬೇಕು ಎಂದು ಇಚ್ಛೆಯುಳ್ಳ ಪುರುಷನು ಎಳ್ಳನ್ನವನ್ನು ಬೇಯಿಸಿ ಹೋಮ ಮಾಡಬೇಕು. ಹೋಮ ಶೇಷವನ್ನು ತುಪ್ಪದೊಂದಿಗೆ ಉಣ್ಣಬೇಕು. ಆಗ ಆ ದಂಪತಿಗಳು ಅಂಥ ಮಗಳನ್ನು ಪಡೆಯಲು ಸಮರ್ಥರಾಗುತ್ತಾರೆ.[೧೫]



---

೧೩) ಅಥ ಯ ಇಚ್ಛೇತ್ ಪುತ್ರೋ ಮೇ ಕಪಿಲಃ ಪಿಂಗಲೋ ಜಾಯೇತ
ದ್ವೌ ವೇದಾವನುಬ್ರುವೀತ ಸರ್ವಮಾಯುರಿಯಾದಿತಿ ದಧ್ಯೋದನಂ ಪಾಚಯಿತ್ವಾ
ಸರ್ಪಿಷ್ಮಂತಮಶ್ನೀಯಾತಾಂ ॥ ಈಶ್ವರೌ ಜನಯಿತವೈ ॥
ಶ್ರೀ ಬೃಹದಾರಣ್ಯಕೋಪನಿಷತ್

೧೪) ಅಥ ಯ ಇಚ್ಛೇತ್ ಪುತ್ರೋ ಮೇ ಶ್ಯಾಮೋ ಲೋಹಿತಾಕ್ಷೋ ಜಾಯೇತ
ತ್ರೀನ್ ವೇದಾನನುಬ್ರುವೀತ ಸರ್ವಮಾಯು ರಿಯಾದಿತಿ ಉದೌದನಂ ಪಾಚಯಿತ್ವಾ
ಸರ್ಪಿಷ್ಮಂತಮಶ್ನೀಯಾತಾಂ ॥ ಈಶ್ವರೌ ಜನಯಿತವೈ ॥
ಶ್ರೀ ಬೃಹದಾರಣ್ಯಕೋಪನಿಷತ್

೧೫) ಅಥ ಯ ಇಚ್ಛೇತ್ ದುಹಿತಾ ಮೇ ಪಂಡಿತಾ ಜಾಯೇತ
ಸರ್ವಮಾಯು ರಿಯಾದಿತಿ । ತಿಲೌದನಂ ಪಾಚಯಿತ್ವಾ
ಸರ್ಪಿಷ್ಮಂತಮಶ್ನೀಯಾತಾಂ ॥ ಈಶ್ವರೌ ಜನಯಿತವೈ ॥
ಶ್ರೀ ಬೃಹದಾರಣ್ಯಕೋಪನಿಷತ್

# ಹೆಣ್ಣು ಹುಟ್ಟಿದಾಗ ದುಃಖ ಬೇಡ ಏಕೆ ?

ಲೋಕದಲ್ಲಿ ಸಾಮಾನ್ಯವಾಗಿ ಹೆಣ್ಣುಮಗು ಹುಟ್ಟಿದಾಗ ಬಹಳ ದುಃಖಪಡುವುದು ಕಂಡಿದೆ. ಇದು ಸರಿಯಲ್ಲ. ಶಾಸ್ತ್ರದ ವಿಚಾರಗಳನ್ನು ಚೆನ್ನಾಗಿ ತಿಳಿದಾಗ ಇದು ಮನದಟ್ಟಾಗುತ್ತದೆ.

ಶಾಸ್ತ್ರಗಳಲ್ಲಿ ಧರ್ಮಶಾಸ್ತ್ರಕಾರರು ನರಕದಿಂದ ಉದ್ಧಾರ ಮಾಡುವವನು ಎಂಬ ದೃಷ್ಟಿಯಿಂದ ಪುತ್ರಲಾಭವನ್ನು ಪ್ರಶಂಸೆ ಮಾಡಿದ್ದು ಅಜ್ಞಜನರ ಮೋಹನಾರ್ಥವಾಗಿಯೇ.[೧]

ಅಂತೆಯೇ ಶ್ರೀ ಕನಕದಾಸರು ತಮ್ಮ ಪದ್ಯವೊಂದರಲ್ಲಿ –

ಮಗನಿಂದೆ ಗತಿಯುಂಟೆ ಜಗದೊಳಗೆ
ನಿಗಮಾರ್ಥ ತತ್ತ್ವ ವಿಚಾರದಿಂದಲ್ಲದೇ ?
..............................................
ಸುತರಿಲ್ಲದವಗೆ ಸದ್ಗತಿ ಇಲ್ಲವೆಂತೆಂಬ
ಕೃತಕ ಶಾಸ್ತ್ರವು ಲೌಕಿಕಭಾವಕೆ
ಕ್ಷಿತಿಯೊಳು ಕಾಗಿನೆಲೆಯಾದಿಕೇಶವ ಜಗ
ತ್ಪತಿಯ ಭಜಿಪಗೆ ಸದ್ಗತಿಯಿರದೆಹೋಹುದೆ ?

– ಎನ್ನುತ್ತ ಸದ್ಗತಿ ಉಂಟಾಗಲು "ಮಗ" ಬೇಕು ಎಂಬುದು ಸರಿಯಲ್ಲ. ಜ್ಞಾನ, ಭಕ್ತಿ, ಶ್ರೀಹರಿ ಭಜನೆ ಇವು ಸದ್ಗತಿ ಹೊಂದಲು ಕಾರಣ ಎಂಬುದು ಗಮನಾರ್ಹ.

ವಾಸ್ತವಿಕವಾಗಿ ಅನೇಕ ಶಾಸ್ತ್ರಗಳ ಆಧಾರಗಳನ್ನು ನೋಡಿದರೆ ಹತ್ತು ಗಂಡುಮಕ್ಕಳಿಗೆ ಶೀಲವತಿಯಾದ ಒಬ್ಬ ಹೆಣ್ಣುಮಗಳು ಸಮವೆಂದು ಹೇಳಿದ್ದಾರೆ. ಮತ್ತು ಹತ್ತು ಪಟ್ಟು ಪುಣ್ಯಕ್ಕೆ ಕಾರಣಳೆಂದು ಹೇಳಿದ್ದಾರೆ.[೨]

---

೧) ಕರ್ತ್ರಾ ತು ಶಾಸ್ತ್ರೇಷು ಸದಾ ಸುತಲಾಭಃ ಪ್ರಶಂಸಿತಃ ।
ಪ್ರಾಣಿನಾಂ ಮೋಹನಾರ್ಥಾಯ ನರಕ ತ್ರಾಣಕಾರಣಾತ್ ॥
(ಶ್ರೀಪದ್ಮಮಹಾಪುರಾಣ)

೨) ಶಾಸ್ತ್ರೇಷೂಕ್ತಮಸಂದಿಗ್ಧಂ ಬಹುವಾರಂ ಮಹಾಫಲಂ ।
ದಶಪುತ್ರ ಸಮಾ ಕನ್ಯಾ ಯಾ ಸ್ಯಾತ್ ಶೀಲವತೀ ಶುಭಾ ॥ (ಶ್ರೀಪದ್ಮಮಹಾಪುರಾಣ)

ಸ್ತ್ರೀ ಇಲ್ಲದೇ ಪ್ರಾಣಿಗಳ ಸೃಷ್ಟಿಯೇ ಇಲ್ಲ.[೩] ಆ ಕಾರಣದಿಂದ ಹೆಣ್ಣು ಹುಟ್ಟಿದಾಗ ಪ್ರಜಾಸೃಷ್ಟಿಗೆ ಕಾರಣಳೆಂಬ ದೃಷ್ಟಿಯಿಂದ ದುಃಖ ಮಾಡುವದು ತರವಲ್ಲ.

ಶ್ರೀಮದಾಚಾರ್ಯರು ಶ್ರೀಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಹೀಗೆ ತಿಳಿಸಿದ್ದಾರೆ– "ಹೆಣ್ಣು ಮಗಳು ತಾನು ಹುಟ್ಟಿದ ತಂದೆಯ ಕುಲಕ್ಕೂ, ಪತಿಯ ಕುಲಕ್ಕೂ ತಾರಕಳೆನಿಸಿರುವಳು. ಪತ್ನಿಯಾಗಿ, ಆತ್ಮೀಯ ಗೆಳತಿಯಾಗಿ ಪತಿಗೆ ಉಪಕಾರಕಳಾಗುತ್ತಾಳೆ.[೪] ಅಂದರೆ ಹೆಣ್ಣುಮಗಳು ತಂದೆಯ ಕುಲ, ಪತಿಯ ಕುಲ ಎರಡನ್ನೂ ಉದ್ಧರಿಸುತ್ತಾಳೆ.

ಹೆಣ್ಣುಮಗಳು ಮಾನವನ ಜನ್ಮಕ್ಷೇತ್ರ. ಜನ್ಮಭೂಮಿಯು ಪವಿತ್ರವೆನ್ನುವದಾದರೆ ಜನ್ಮಕ್ಷೇತ್ರವು ಪವಿತ್ರತಮವಾದುದು.[೫] (ಆದ್ದರಿಂದಲೇ ಸ್ತ್ರೀಯರು ತಮ್ಮ ಪತಿಗಳಿಗೆ ಸನಾತನವಾದ ಪುಣ್ಯಕ್ಷೇತ್ರವೂ ಆಗಿದ್ದಾರೆ.)

ಕೊನೆಯದಾಗಿ ಸಂತತಿ, ಧರ್ಮಕಾರ್ಯಗಳು (ಪಂಚ ಮಹಾಯಜ್ಞ), ದೇಹೋಪಚಾರ, ಉತ್ತಮ ರತಿ, ತನಗೆ ಮತ್ತು ತನ್ನ ಪಿತೃಗಳಿಗೆ ಸ್ವರ್ಗಪ್ರಾಪ್ತಿ ಇವು ಸ್ತ್ರೀಯ (ಪತ್ನಿಯ) ಅಧೀನವಾಗಿರುತ್ತವೆ.[೬] ಅಂದರೆ ಇವೆಲ್ಲ ಕಾರ್ಯಗಳಿಗೆ ಹೆಣ್ಣುಮಗಳು ಅವಶ್ಯವೆಂದು ತಿಳಿಯಬೇಕು.

ಈ ಎಲ್ಲ ಕಾರಣಗಳಿಂದ ಗಂಡು ಮಗು ಹುಟ್ಟಿದರೆ ಎಷ್ಟು ಸಂತೋಷಪಡುವರೋ (ಪ್ರಜಾವೃದ್ಧಿ ಆಗುವುದೆಂದು) ಅಷ್ಟೇ ಸಂತೋಷವನ್ನು ಹೆಣ್ಣುಮಗು ಹುಟ್ಟಿದಾಗಲೂ ಹೊಂದಬೇಕೆಂಬುದು ಇಲ್ಲಿಯ ಮುಖ್ಯ ಆಶಯವಾಗಿದೆ.

– ⊙ –

---

೩) ಸ್ತ್ರಿಯಾ ವಿರಹಿತಾ ಸೃಷ್ಟಿರ್ಜಂತೂನಾಂ ನೋಪಪದ್ಯತೇ ॥ (ಶ್ರೀಪದ್ಮ ಮಹಾಪುರಾಣ)

೪) ಕನ್ಯೋದಿತಾ ಬತ ಕುಲದ್ವಯತಾರಿಣೀತಿ-
ಜಾಯಾ ಸಖೇತಿ ವಚನಂ ಶ್ರುತಿಗಂ ಸುತಶ್ಚ ॥
(ಶ್ರೀಮನ್‌ಮಹಾಭಾರತ ತಾ.ನಿ. ೧೯-೭೬)

೫) ಆತ್ಮನೋ ಜನ್ಮನಃ ಕ್ಷೇತ್ರಂ ಪುಣ್ಯಂ ರಾಮಾಃ ಸನಾತನಮ್ ॥
(ಶ್ರೀಮನ್‌ಮಹಾಭಾರತ ಆದಿಪರ್ವ)

೬) ಅಪತ್ಯಂ ಧರ್ಮಕಾರ್ಯಾಣಿ ಶುಶ್ರೂಷಾ ರತಿರುತ್ತಮಾ ।
ದಾರಾಧೀನಸ್ತಥಾ ಸ್ವರ್ಗಃ ಪಿತೃಣಾಮಾತ್ಮನಶ್ಚ ಹಿ ॥ (ಮನುಸ್ಮೃತಿ ೯-೨೮)

## "ನ ಸ್ತ್ರೀ ಸ್ವಾತಂತ್ರ್ಯಮರ್ಹತಿ" –ನಿಜಾರ್ಥವೇನು ?

ಮನುಸ್ಮೃತಿಯಲ್ಲಿ ಸ್ತ್ರೀಪುರುಷರ ಕುರಿತು ಅನೇಕ ಉಪದೇಶಯುಕ್ತ ಮಾತುಗಳು ಬಂದಿವೆ. ಸ್ತ್ರೀಯಾದವಳು ತಂದೆ, ಗಂಡ, ಮಗ ಇವರ ವಶದಲ್ಲಿ ಇರಬೇಕಾಗುತ್ತದೆ ಎಂದಾಗಿ ಹೇಳುತ್ತ ಈ ಕೆಳಗಿನ ಮಾತನ್ನು ತಿಳಿಸಿದೆ.

ಪಿತಾರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ ।
ರಕ್ಷಂತಿ ಸ್ಥವಿರೇ ಪುತ್ರಾಃ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ ॥ (೯-೩)

ಚಿಕ್ಕಂದಿನಲ್ಲಿ (ಸ್ತ್ರೀಯನ್ನು) ತಂದೆಯು ಮಗಳನ್ನು ರಕ್ಷಿಸುತ್ತಾನೆ. ಯೌವನದಲ್ಲಿ ಮದುವೆಯ ನಂತರ ಪತಿಯು ಅವಳನ್ನು ರಕ್ಷಿಸುತ್ತಾನೆ. ವಯಸ್ಸಾದ ನಂತರ ಮಕ್ಕಳು ಅವಳನ್ನು ರಕ್ಷಿಸುತ್ತಾರೆ. ರಕ್ಷಣೆಯ ವಿಷಯದಲ್ಲಿ ಸ್ತ್ರೀಗೆ ಯಾವಾಗಲೂ ಸ್ವಾತಂತ್ರ್ಯವಿಲ್ಲ.

ಈಗ "ನ ಸ್ತ್ರೀ ಸ್ವಾತಂತ್ರ್ಯಮರ್ಹತಿ" ಎಂಬ ಶ್ಲೋಕಭಾಗವನ್ನಷ್ಟೇ ವಿಚಾರಣೆಗೆ ತೆಗೆದುಕೊಂಡು ಎಲ್ಲೆಡೆಯಲ್ಲಿಯೂ ವಿರೋಧ ವ್ಯಕ್ತವಾಗುತ್ತಿದೆ. ಈ ಮಾತಿಗೆ ಸಂಬಂಧಪಟ್ಟ ಶ್ಲೋಕದ ಉಳಿದ ಮೂರು ಪಾದಗಳನ್ನು ವಿಚಾರಣೆಗೆ ತೆಗೆದುಕೊಳ್ಳದೇ ತಮ್ಮದೇ ಆದ ವಿಚಾರಧಾರೆಯನ್ನು ಮಂಡಿಸುವ ಜನಗಳಿಗೆ ಏನು ಹೇಳಲು ಸಾಧ್ಯ ?

ಇಲ್ಲಿ ಉದಾಹರಣೆಯೊಂದನ್ನು ಕೊಟ್ಟು ಇದರ ಸರಿಯಾದ ಅರ್ಥವೇನು ? ಎಂಬುದಾಗಿ ತಿಳಿಸಲು ಪ್ರಯತ್ನ ಮಾಡೋಣ.

ಒಂದು ವಜ್ರದ ಉಂಗುರವಿದೆ. ಅದನ್ನು ಮೊದಲಿಗೆ ಒಬ್ಬ ಮನುಷ್ಯ ಧಾರಣೆ ಮಾಡುತ್ತಾನೆ. ಅವನ ತರುವಾಯ ಅವನ ಮಗ ಅದನ್ನು ಧರಿಸುತ್ತಾನೆ. ನಂತರ ಅವನ ಮಗ ಅದನ್ನು ಧರಿಸುತ್ತಾನೆ. ಆದರೆ ಯಾರೂ ಅದಕ್ಕೆ ಅಯ್ಯೋ ! ವಜ್ರಕ್ಕೆ ಸ್ವಾತಂತ್ರ್ಯವಿಲ್ಲವಲ್ಲ ಎಂದೆನ್ನುವದಿಲ್ಲ. ಹಾಗೆ ಭಾವಿಸುವುದೂ ಇಲ್ಲ. ಅದು ಅಮೌಲ್ಯ ವಸ್ತುವಾದ ಪ್ರಯುಕ್ತ ಅದನ್ನು ಎಲ್ಲಿಯೂ ಇಡದೇ ರಕ್ಷಿಸುತ್ತ ಧಾರಣೆ ಮಾಡುತ್ತಾರೆ. ಹಾಗೆಯೇ ತಂದೆ, ಗಂಡ, ಮಕ್ಕಳು ಕೂಡ ಸ್ತ್ರೀಯನ್ನು ಆಯಾ ಕಾಲಗಳಲ್ಲಿ ರಕ್ಷಿಸುತ್ತ ಬರುತ್ತಾರೆ. ಆ ಪ್ರಸಂಗದಲ್ಲಿ ಸ್ವಾತಂತ್ರ್ಯದ ಕುರಿತು ವಿಚಾರವೇ ಬರುವದಿಲ್ಲ. ಅವಳ ರಕ್ಷಣೆ ಅವರ ಜವಾಬುದಾರಿ ಎಂದಿಷ್ಟೇ ಅರ್ಥ ಹೇಳಬೇಕು. ರಕ್ಷಣೆಯ ವಿಷಯದಲ್ಲಿ ಅವಳಿಗೆ ಸ್ವಾತಂತ್ರ್ಯ ಅನುಚಿತ ಎಂಬ ವಿವಕ್ಷೆ ಇಲ್ಲಿ ಮೂಡಿ ಬಂದಿದೆ.

ಇನ್ನೊಂದು ವಿವಕ್ಷೆಯಿಂದ ಇದರ ಅರ್ಥವನ್ನು ಹೀಗೆ ವಿವರಿಸಬಹುದು. ಇಂದು "ಸ್ವಾತಂತ್ರ್ಯ" ಎಂದರೆ ಯಾರ ಅಧೀನದಲ್ಲೂ ಇಲ್ಲದಿರುವುದು ಎಂಬ ಅರ್ಥವು

ಪ್ರಚಲಿತವಿದೆ. ಮನುವಿನ ಕಾಲದ ಅರ್ಥವೇ ಬೇರೆಯಾಗಿತ್ತು. ಅಂದರೆ ಜೀವನಕ್ಕಾಗಿ ಗಳಿಸುವ ಕೆಲಸದಿಂದ ಮುಕ್ತರಾಗಿರಬೇಕು ಎಂದಿತ್ತು. ತಂದೆ ತನ್ನ ಸಂಪಾದನೆಯಿಂದ ಮಗಳನ್ನು ಕಾಪಾಡಬೇಕು. ನಂತರ ಪತಿ ತನ್ನ ಸಂಪಾದನೆಯಿಂದ ಪತ್ನಿಯ ರಕ್ಷಣೆಯ ಹೊರೆ ಹೊರಬೇಕು. ನಂತರ ಮಗನು ತನ್ನ ತಾಯಿಯ ಜೀವನ ನಡೆಸುವ ಹೊಣೆ ಹೊರಬೇಕು. ಯಾವ ಸ್ಥಿತಿಯಲ್ಲೂ ಹೆಣ್ಣುಮಗಳು ತನ್ನ ಜೀವನಕ್ಕಾಗಿ ಗಳಿಸುವ ಸ್ಥಿತಿ ಬರಬಾರದು. ಇದಕ್ಕೆ ಕಾರಣವೂ ಇಲ್ಲದಿಲ್ಲ. ಅವಳು ಮಕ್ಕಳ ಪಾಲನೆ, ಪೋಷಣೆಯ ಹಿರಿದಾದ ಹೊಣೆ ಹೊತ್ತಿರುವುದರಿಂದ, ಪತಿಯ ಶುಶ್ರೂಷೆಯನ್ನು ಮಾಡುವ ಕೆಲಸ ಅವಳಿಗೆ ಇರುವುದರಿಂದ, ಅವಳಿಗೆ ಹಣ ಗಳಿಕೆಯ ಜವಾಬುದಾರಿ ಇರಬಾರದು ಎಂಬರ್ಥದಲ್ಲಿ "ನ ಸ್ತ್ರೀ ಸ್ವಾತಂತ್ರ್ಯಮರ್ಹತಿ" ಎಂಬುದಾಗಿ ಮನುವು ಹೇಳಿದ್ದಾನೆ ಎಂದು ತಿಳಿಯುವಲ್ಲಿ ಯಾವ ಅನುಪಪತ್ತಿಯೂ ಇಲ್ಲ. ಕುಟುಂಬದ ಪೋಷಣೆಯ ಕೆಲಸವಷ್ಟೇ ಅಲ್ಲದೇ ಹಣಗಳಿಕೆಯ (ಸಂಪಾದನೆಯ) ಕೆಲಸವೂ ಅವಳಿಗೆ ಬಂದುಬಿಟ್ಟರೆ ಅವಳ ಶಕ್ತಿಗೆ ಮೀರಿದ ದುಡಿಮೆ, ಶಾರೀರಿಕ, ಮಾನಸಿಕ ಆಯಾಸಗಳು ಅವಳನ್ನು ಕಂಗೆಡಿಸುವ ಸಾಧ್ಯತೆಯೂ ಇದೆ. ಇದು ಇಲ್ಲಿ ವಿವಕ್ಷಿತವಾದ ಅರ್ಥವೆಂದು ಹೇಳಿದರೆ ತಪ್ಪಾಗದು.

– ⊙ –

# ದಾಂಪತ್ಯ ಸಮಸ್ಯೆಗಳು - ಪರಿಹಾರ

ದಂಪತಿಗಳು ಹೊಸತನದಲ್ಲಿದ್ದಾಗ ಒಬ್ಬರ ಸ್ವಭಾವ ಇನ್ನೊಬ್ಬರಿಗಿಂತ ಭಿನ್ನವಾಗಿದೆ ಎಂಬ ಅರಿವು ಇರದಿರುವುದೇ ದಾಂಪತ್ಯ ಸಮಸ್ಯೆಗೆ ಕಾರಣವಾಗಿದೆ. ಇಬ್ಬರೂ ಬೆಳೆದು ಬಂದ ವಾತಾವರಣ, ಹವ್ಯಾಸ, ಅಭಿರುಚಿಗಳು ಬೇರೆ ಬೇರೆಯಾಗಿರುತ್ತವೆ. ದಂಪತಿಗಳು ಈ ವಿಷಯವನ್ನು ಮನದಲ್ಲಿಟ್ಟು ಒಬ್ಬರು ಇನ್ನೊಬ್ಬರನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಬೇಕಾದುದು ಅತ್ಯವಶ್ಯವಾಗಿದೆ. ಸ್ತ್ರೀಯು ಸಹನಶೀಲೆ ಎಂಬ ಕಾರಣದಿಂದ ಅವಳೇ ಹೊಂದಿಕೊಳ್ಳಬೇಕೆಂದು ಹೇಳುವವರೇ ಹೆಚ್ಚು. ನಿಜವಾಗಿ ನೋಡಿದರೆ ಹಾಗೇನೂ ಅಂದುಕೊಳ್ಳುವ ಕಾರಣವಿಲ್ಲ. ಇಬ್ಬರೂ ಸಹನಶೀಲರಾಗಿ ನಡೆದುಕೊಂಡಾಗ ಮಾತ್ರ ದಾಂಪತ್ಯ ಸುಖಮಯವಾಗಬಲ್ಲದು. ಪತಿಪತ್ನಿಯರ ಹೊಂದಾಣಿಕೆ ಜೀವನದ ಪ್ರತಿಯೊಂದು ಘಟ್ಟದಲ್ಲಿ ಇರಬೇಕಾಗುತ್ತದೆ.

ಪತಿಪತ್ನಿಯರು ಗೃಹಸ್ಥಾಶ್ರಮದಲ್ಲಿ ಕಾಲಿರಿಸಿದಾಗ ಇಬ್ಬರೂ ಅವರವರ ಹೊಣೆಗಾರಿಕೆಯನ್ನು ಚೆನ್ನಾಗಿ ಅರಿತಿರಬೇಕು. ಇಲ್ಲದಿದ್ದರೆ ಸ್ವರ್ಗ ಸದೃಶವಾಗಬೇಕಾದ ಗೃಹಸ್ಥಾಶ್ರಮ ನರಕ ಸದೃಶವಾಗುತ್ತದೆ.

ಶ್ರೇಷ್ಠ ಸಂತಾನಕ್ಕಾಗಿ ಪತಿಪತ್ನಿಯರು ಉತ್ತಮವಾದ ವಿಚಾರ ಧ್ಯೇಯಗಳಿಂದ ಕೂಡಿರಬೇಕು. ಇಬ್ಬರೂ ಪ್ರಫುಲ್ಲಿತವಾದ ಮನಸ್ಸಿನಿಂದ ಬೆರೆತು ಸಮಾಗಮ ನಡೆಸಬೇಕು.

ಜೀವನದಲ್ಲಿ ಅನೇಕ ಅಹಿತಕರ, ಪ್ರತಿಕೂಲವಾದ ಘಟನೆಗಳು ಸಂಭವಿಸುವದುಂಟು. ಆದರೆ ಇಂಥ ಪ್ರಸಂಗಗಳಲ್ಲಿ ಅವುಗಳಿಗೆ ಪತಿ ಅಥವಾ ಪತ್ನಿ ಯಾರೇ ಕಾರಣರಾಗಿದ್ದರೂ ಪರಸ್ಪರ ದ್ವೇಷ ಭಾವನೆ ಬೆಳೆಸಿಕೊಳ್ಳಬಾರದು. ವಿಚಾರ ವಿನಿಮಯಗಳಿಂದ ಸಮಸ್ಯೆಯನ್ನು ಬಗೆಹರಿಸಿಕೊಳ್ಳಬೇಕು.

ವಿವಾಹದ ನಂತರ ಪತಿ ಪತ್ನಿಯರು ವೈಯಕ್ತಿಕವಾದ ಸ್ವಾತಂತ್ರ್ಯವನ್ನು ಕಳೆದುಕೊಳ್ಳುತ್ತಾರೆ. ಆದರೆ ಯಾವುದೇ ಕಾರ್ಯ ಮಾಡುವಾಗ ಇಬ್ಬರೂ ಚರ್ಚಿಸಿ ಐಕ್ಯಮತ್ಯವನ್ನು ಹೊಂದಿ ಅದನ್ನು ಮಾಡಿದ್ದಾದರೆ ಯಾವುದೇ ಸಮಸ್ಯೆ ತಲೆದೋರುವುದಿಲ್ಲ.

ಪತ್ನಿಯು ಪತಿಯ ಹೃದಯವನ್ನರಿತು ಹಾಗೆಯೇ ಪತಿಯು ಪತ್ನಿಯ ಹೃದಯವನ್ನರಿತು ವ್ಯವಹರಿಸಬೇಕಾದುದು ಅವಶ್ಯ. ಇದರಿಂದ ದಾಂಪತ್ಯದಲ್ಲಿ ಬಿರುಗಾಳಿ ಬರುವುದೇ ಇಲ್ಲ.

ಜೀವನದಲ್ಲಿ ಬರುವ ಅನೇಕ ಸಂಘರ್ಷದ ಸನ್ನಿವೇಶಗಳಲ್ಲಿ ಇಬ್ಬರೂ ಬಹಳ ಶಾಂತಚಿತ್ತರಾಗಿ ನಡೆದುಕೊಳ್ಳಬೇಕು. ಇನ್ನೊಬ್ಬರು ದಂಪತಿಗಳ ವ್ಯವಹಾರದಲ್ಲಿ ತಲೆತೂರಿಸದಿರುವಂತೆ ಎಚ್ಚರಿಕೆ ವಹಿಸಬೇಕು. ಇದರಿಂದ ಮಾನಸಿಕ ಆಘಾತಗಳು ಕಡಿಮೆಯಾಗುತ್ತವೆ.

ಧರ್ಮಕಾರ್ಯಗಳನ್ನು ಮಾಡುವಾಗ ಎಚ್ಚರಿಕೆಯಿಂದ, ಆ ಭಗವಂತನ ಪ್ರೀತಿಯನ್ನು ಮಾತ್ರ ಅಪೇಕ್ಷಿಸಿ ಪ್ರವೃತ್ತರಾಗಬೇಕು.

"ಮಾತು ಬಂದಾಗ ಸೋತು ಹೋದವನೇ ಜಾಣ" ಎಂಬ ನಾಣ್ಣುಡಿಯಂತೆ ಯಾವುದಾದರೂ ಜಗಳದ ಪ್ರಸಂಗವಿದ್ದಾಗ "ಸೋತು ಗೆದ್ದವರಾಗಲು" ಪ್ರಯತ್ನಿಸಬೇಕು. ಸೋಲು ಒಪ್ಪಿಕೊಳ್ಳುವದು (Ego) ಸ್ವಾಭಿಮಾನದ ಪ್ರಶ್ನೆಯೇ ಆಗಿದ್ದರೂ ದಾಂಪತ್ಯದಲ್ಲಿ "ವಿರಸ" ಬರಬಾರದೆಂದು ಇಚ್ಛಿಸುವುದಾದರೆ ಇದನ್ನು ಕೆಲಮಟ್ಟಿಗೆ ಬಿಟ್ಟುಬಿಡುವುದೇ ಸೂಕ್ತ.

ಮೊಟ್ಟಮೊದಲ ಸಮಾಗಮದಲ್ಲಿ ಬಹಳ ಮೃದುತನದಿಂದ ವರ್ತಿಸಬೇಕು. ಮೃದುವಾದ ಸಂಭಾಷಣೆ, ಸ್ನೇಹಪೂರ್ವಕ ಮಾತುಕತೆ ಇವು ಸುಖ ದಾಂಪತ್ಯವನ್ನು ನಿರ್ಮಿಸುವುದರಲ್ಲಿ ಸಂದೇಹವಿಲ್ಲ.

ವಿವಾಹ ಸಮಯದಲ್ಲಿ ಮಾಡಿದ ಪ್ರತಿಜ್ಞೆ*ಯನ್ನು ನೆನಪಿನಲ್ಲಿಟ್ಟು ಪ್ರತಿ ಹೆಜ್ಜೆಗೂ ಧರ್ಮ, ಅರ್ಥ, ಕಾಮಗಳ ವಿಷಯದಲ್ಲಿ ಒಬ್ಬರನ್ನೊಬ್ಬರು ಅರಿತು ಸಹಬಾಳ್ವೆಯನ್ನು ನಡೆಸಿದಾಗ ದಾಂಪತ್ಯವು ಸುಖಕ್ಕೆ ನಾಂದಿಯಾಗುತ್ತದೆ.

ಪತ್ನಿಯು ಪತಿಯ ಬಯಕೆಗಳನ್ನು ಆದರಿಸಬೇಕು. ಹಾಗೆಯೇ ಪತಿಯು ಪತ್ನಿಯ ಬಯಕೆಗಳನ್ನು ಆದರಿಸಬೇಕು. ಇದು ದಾಂಪತ್ಯದಲ್ಲಿ ಸುಖದ ವಾತಾವರಣ ನಿರ್ಮಿಸುತ್ತದೆ.



* ಧರ್ಮೇ ಚ ಅರ್ಥೇ ಚ ಕಾಮೇ ಚ ನಾತಿಚರಾಮಿ

# ಶ್ರೀಮದ್‌ಭಾಗವತ ನಿರೂಪಿಸಿದ ಗೃಹಸ್ಥ ಧರ್ಮಗಳು

ಗುರುಕುಲವಾಸವನ್ನು ಮುಗಿಸಿದ ಬ್ರಹ್ಮಚಾರಿಯು ಗುರುಗಳಿಗೆ ಗುರುದಕ್ಷಿಣೆಯನ್ನು ಯಥಾಯೋಗ್ಯವಾಗಿ ಕೊಟ್ಟು, ಗುರುಗಳ ಅಪ್ಪಣೆ ಪಡೆದು ವೈರಾಗ್ಯವಿದ್ದರೆ ಸನ್ಯಾಸಿಯಾಗಬೇಕು. ಇಲ್ಲದಿದ್ದರೆ ಗೃಹಸ್ಥಾಶ್ರಮಿಯು ಆಗಬೇಕು.

ಗೃಹಸ್ಥಾಶ್ರಮಿಯಾಗಬಯಸಿದವನು ತನಗಿಂತ ಚಿಕ್ಕವಳೂ, ಸುಶೀಲಳೂ, ಕುಷ್ಠರೋಗಾದಿರಹಿತಳೂ ಆದ ಕನ್ಯೆಯನ್ನು ಮದುವೆಯಾಗಬೇಕು. ಬ್ರಾಹ್ಮಣರಿಗೆಲ್ಲ ಯಜನ, ಅಧ್ಯಯನ, ಅಧ್ಯಾಪನ, ಯಾಜನ, ದಾನ, ಪ್ರತಿಗ್ರಹಗಳೆಂಬ ಷಟ್ಕರ್ಮಗಳುಂಟು. ಆದರೆ ಪ್ರತಿಗ್ರಹದಿಂದ ತಪಸ್ಸು, ತೇಜಸ್ಸು, ಯಶಸ್ಸು ಕೆಡುವುದೆಂದು ತಿಳಿದು ಯಾಜನ, ಅಧ್ಯಾಪನಗಳಿಂದ ಜೀವಿಸಬೇಕು. ಅದೂ ತಪ್ಪೆಂದು ತೋರಿದಾಗ ಶಿಲೋಂಛವೃತ್ತಿಯಿಂದ ಜೀವಿಸಬೇಕು, ಬ್ರಾಹ್ಮಣನ ದೇಹವು ಕ್ಷುದ್ರ ಕಾಮಭೋಗಕ್ಕಾಗಿ ಬಂದುದಲ್ಲ. ಕಷ್ಟಪಟ್ಟು ತಪಸ್ಸನ್ನು ಮಾಡಿ ವಿರಕ್ತನಾಗಿ ಇಹವನ್ನು ತೊರೆದು ವೈಕುಂಠದ ಅನಂತ ಸುಖಕ್ಕಾಗಿ ಪ್ರಯತ್ನಿಸಬೇಕು ಎಂಬುದಾಗಿ ತಿಳಿಯಬೇಕು.[೧]

ಶಿಲೋಂಛವೃತ್ತಿಯಿಂದ ಸಂತುಷ್ಟನಾಗಿ ಪಾಪರಹಿತ ನಿಷ್ಕಾಮ ಕರ್ಮಗಳನ್ನು ಮಾಡಿ ಭಗವಂತನಿಗೆ ಸಮರ್ಪಿಸುವ ಗೃಹಸ್ಥನು, ಭಗವಂತನಲ್ಲಿ ನೆಟ್ಟ ಮನಸ್ಸುಳ್ಳವನಾಗಿದ್ದರೆ ಸಾಕು, ವೈಕುಂಠಲೋಕವನ್ನು ತಪ್ಪದೇ ಹೊಂದುತ್ತಾನೆ.

ಕಷ್ಟ ಕಾಲವು ಬಂದಾಗ ಬ್ರಾಹ್ಮಣನು ಖಡ್ಗದಿಂದಲೋ ಅಥವಾ ವಣಿಗ್ವೃತ್ತಿಯಿಂದ ಜೀವಿಸಬಹುದು. ನೀಚವಾದ ಶ್ವವೃತ್ತಿಯಿಂದ ಜೀವಿಸಬಾರದು.

ಬ್ರಾಹ್ಮಣನು ವೇದವನ್ನೋದಿ, ದೇವಕಾರ್ಯ (ಸ್ವಾಹಾ), ಪಿತೃಕಾರ್ಯ (ಸ್ವಧಾ) ಬಲಿಹರಣ ಅನ್ನದಾನಾದಿಗಳಿಂದ ದೇವ, ಪಿತೃ, ಋಷಿ, ಭೂತ, ನರರನ್ನು ಸಮ್ಮಾನಿಸಿ ಪಂಚಯಜ್ಞಪರನಾಗಿರಬೇಕು.[೨]

---

೧) ಬ್ರಾಹ್ಮಣಸ್ಯ ಚ ದೇಹೋಽಯಂ ಕ್ಷುದ್ರಕಾಮಾಯ ನೇಷ್ಯತೇ ।
ಕೃಛ್ರಾಯ ತಪಸೇ ಚೈವ ಪ್ರೇತ್ಯಾನಂತ ಸುಖಾಯ ಚ ॥ (೧೧-೧೭-೪೨)

೨) ವೇದಾಧ್ಯಾಯ ಸ್ವಧಾ ಸ್ವಾಹಾ ಬಲ್ಯನ್ನಾದ್ಯೈರ್ಯಥೋದಯಮ್ ।
ದೇವರ್ಷಿಪಿತೃಭೂತಾನಿ ಮದ್ರೂಪಾಣ್ಯನ್ವಹಂ ಯಜೇತ್ ॥ (೧೧-೧೭-೫೦)

ಶುದ್ಧವಾದ ನ್ಯಾಯಾರ್ಜಿತವಾದ ಧನದಿಂದ ಸಂತುಷ್ಟನಾಗಿ ಸೇವಕರನ್ನು ಪೀಡಿಸದೆ ನಿತ್ಯವೂ ಭಗವಂತನನ್ನು ಹವಿರ್ದಾನದಿಂದ ಪೂಜಿಸಬೇಕು. ಕುಟುಂಬಿಯಾಗಿದ್ದರೂ ಪ್ರಮಾದವಿಲ್ಲದೇ, ಇಂದ್ರಿಯಾರಾಮನಾಗದೇ ಇಹದ ಸುಖ, ಸ್ವರ್ಗಸುಖವು ನಶ್ವರವೆಂದು ತಿಳಿದು ಭಗವಂತನಲ್ಲಿ ಭಕ್ತಿ ಮಾಡುತ್ತಿರಬೇಕು. ಹಾದಿಕಾರರು ಕಲೆತು ಕೆಲಕಾಲ ಮಾತ್ರ ಸೇರಿರುವ ಅರವಟ್ಟಿಗೆಯಂತೆ ಪುತ್ರದಾರಾದಿಗಳ ಸಂಗಮವಾದ ಗೃಹವು ನಶ್ವರವು ಎಂದು ತಿಳಿಯಬೇಕು.[೩]

ಸ್ವಪ್ನವು ನಿದ್ರೆ ಮಾಡುವವನಿಗೆ ವಿನಾ ಎಚ್ಚತ್ತಿರುವವನಿಗೆ ಅಲ್ಲವೆಂದು ವಿಚಾರಿಸಿ ಭಗವಂತನಲ್ಲಿ ಮನಸ್ಸಿಟ್ಟು ಗೃಹದಲ್ಲಿ ಅತಿಥಿಯಂತೆ ನಿರ್ಮಮ, ನಿರಹಂಕಾರನಾಗಿ ನಿರ್ಲಿಪ್ತತೆಯಿಂದ ಇರಬೇಕು. ಗೃಹಮೇಧೀಯ ಕರ್ಮಗಳಿಂದ ಭಗವಂತನನ್ನು ಪೂಜಿಸಿ ವಾನಪ್ರಸ್ಥಾಶ್ರಮಿ ಅಥವಾ ಸಂನ್ಯಾಸಿಯು ಆಗಬೇಕು.

ಪುತ್ರ, ದಾರ, ಧನೇಷಣಗಳಿಂದ ಆಸಕ್ತನಾಗಿ, ಕೃಪಣನಾಗಿ, ಮೂರ್ಖನಾಗಿ, ನಾನು ನನ್ನದೆಂಬ ಅಭಿಮಾನದಿಂದ ಜೀವನು ಸಂಸಾರದಲ್ಲಿ ದುಃಖ ಪಡುತ್ತಾನೆ.[೪]

ಅಯ್ಯೋ ! ಏನು ಮಾಡಲಿ ? ತಂದೆ ತಾಯಿ ಮುದುಕರು, ಹೆಂಡತಿ ಚಿಕ್ಕವಳು, ಮಕ್ಕಳು ಶಿಶುಗಳಾಗಿದ್ದಾರೆ. ಈ ಅನಾಥರು ನಾನು ಮೃತನಾದ ಮೇಲೆ ಹೇಗೆ ಬದುಕುವರು ? ಹೀಗೆ ಚಿಂತಾಕ್ರಾಂತನಾಗಿ ಮೂಢನಾದ ನರನು ಆಶಾಪಾಶದ ತುದಿಯಲ್ಲಿರುವ ಯಮಪಾಶದ ಉರುಲಿಗೆ ಸಿಕ್ಕು ಸಾಯುವನು. ಇಂಥ ನರನು ತಮಸ್ಸನ್ನು ಹೊಂದುತ್ತಾನೆ.



೩) ಪುತ್ರದಾರಾಪ್ತ ಬಂಧೂನಾಂ ಸಂಗಮಃ ಪಾಂಥಸಂಗಮಃ ॥ (೧೧-೧೭-೫೩)

೪) ಯಸ್ತ್ವಾಸಕ್ತಮತಿರ್ಗೇಹೇ ಪುತ್ರವಿತ್ತೈಷಣಾತುರಃ ।
ಸ್ತ್ರೈಣಃ ಕೃಪಣಧೀರ್ಮೂಢೋ ಮಮಾಹಮಿತಿ ಬಧ್ಯತೇ ॥ (೧೧-೧೭-೫೭)

# ಶ್ರೀಮದ್‌ಭಾಗವತ ನಿರೂಪಿಸಿದ ಗೃಹಿಣೀ ಧರ್ಮಗಳು

ಗೃಹಿಣಿಯು ಯಾವಾಗಲೂ ಪತಿಪರಾಯಣೆಯಾಗಿರಬೇಕು. ಪತಿಯನ್ನು ದೇವರಂತೆ ಗೌರವಿಸಬೇಕು. ಆತನ ಮಾತಿನಂತೆ ನಡೆಯಬೇಕು. ಪತಿಯ ಬಂಧುಗಳನ್ನೂ ಗೌರವಿಸಬೇಕು.

ನಿತ್ಯದಲ್ಲಿ ಕಸ ತೆಗೆದು, ಸಾರಿಸಿ ರಂಗವಲ್ಲಿ ಹಾಕಿ ಮನೆಯನ್ನು ಅಲಂಕಾರಪೂರ್ಣವಾಗಿಡಬೇಕು. ತಾನು ಅಲಂಕೃತಳಾಗಿ, ಶುದ್ಧವಾದ ಬಟ್ಟೆಗಳನ್ನು ಧರಿಸಿ ವಿನಯಪೂರ್ಣಳಾಗಿ ಸತ್ಯವೂ, ಪ್ರಿಯವೂ ಆದ ಮಾತುಗಳಿಂದ ಪತಿಯನ್ನು ಸಂತೋಷಗೊಳಿಸಬೇಕು.[೧]

ಸಾಧ್ವಿಯಾದ ಗೃಹಿಣಿಯು ಇದ್ದುದರಲ್ಲಿ ಸಂತುಷ್ಟಳಾಗಿ, ಅಯೋಗ್ಯ ವಿಷಯಾಭಿಲಾಷೆ ರಹಿತಳಾಗಿ, ಕಾರ್ಯದಕ್ಷಳಾಗಿ, ಧರ್ಮಜ್ಞಳಾಗಿ, ಶುಚಿಯಾಗಿ ಪತಿಯನ್ನು ಸೇವಿಸಬೇಕು.

ಯಾವ ಸ್ತ್ರೀಯು ಲಕ್ಷ್ಮೀದೇವಿಯಂತೆ ಪತಿಯಲ್ಲಿ ಆಸಕ್ತಳಾಗಿ ತನ್ನ ಪತಿಯಲ್ಲಿ ಶ್ರೀಹರಿಯು ಸನ್ನಿಹಿತನಾಗಿರುವನೆಂದು ತಿಳಿದು ಪತಿಯನ್ನು ಸೇವಿಸುವಳೋ ಅವಳು ಲಕ್ಷ್ಮೀದೇವಿಯಂತೆ ವೈಕುಂಠದಲ್ಲಿ ಶ್ರೀಹರಿಯ ವಿಶೇಷ ಸನ್ನಿಧಾನಯುಕ್ತ ಪತಿಯೊಂದಿಗೆ ಆನಂದಪಡುತ್ತಾಳೆ.[೨]

ಪತಿಯು ಪ್ರಸನ್ನನಾದ ಪಕ್ಷದಲ್ಲಿ ಪತ್ನಿಗೆ ಇಹಲೋಕದಲ್ಲಿಯಾಗಲೀ, ಪರಲೋಕದಲ್ಲಿಯಾಗಲೀ ಯಾವುದೇ ಕೋರಿಕೆಯ ವಸ್ತುವೂ ದುರ್ಲಭವಾಗುವದಿಲ್ಲ. ಅಂದರೆ ಸುಲಭವಾಗಿ ಎಲ್ಲವನ್ನೂ ಹೊಂದುತ್ತಾಳೆ.[೩]

---

೧) ಸಂಮಾರ್ಜನೋಪಲೇಪಾಭ್ಯಾಂ ಗೃಹಮಂಡಲವರ್ತನೈಃ ।
ಸ್ವಯಂ ಚ ಮಂಡಿತಾ ನಿತ್ಯಂ ಪರಿಮೃಷ್ಟ ಪರಿಚ್ಛದಾ ॥ (೭-೧೧-೨೬)

೨) ಯಾ ಪತಿಂ ಹರಿಭಾವೇನ ಭಜೇತ್ ಶ್ರೀರಿವ ತತ್ಪರಾ ।
ಹರ್ಯಾತ್ಮನಾ ಹರೇರ್ಲೋಕೇ ಪತ್ಯಾ ಶ್ರೀರಿವ ಮೋದತೇ ॥(೭-೧೧-೨೯)

೩) ಸ್ತ್ರಿಯಾ ಭರ್ತರಿ ಸುಪ್ರೀತೇ ಕಃ ಕಾಮ ಇಹಚಾಗಮಃ ॥ (೬-೧೮-೩೨)

"ಪತಿಯೇ ಸ್ತ್ರೀಯರಿಗೆ ಪರಮಾರಾಧ್ಯವಾದ ಇಷ್ಟದೇವರು"[೪] ಎಂದು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ.

ತಮ್ಮ ಕಲ್ಯಾಣವನ್ನು ಬಯಸುವ ಪತಿವ್ರತಾ ಸ್ತ್ರೀಯರು ಅನನ್ಯ ಪ್ರೇಮದಿಂದ ತಮ್ಮ ಪತಿದೇವರನ್ನೇ ಪೂಜೆ ಮಾಡಬೇಕು. ಪತಿದೇವನೇ ಅವರ ಪರಮ ಪ್ರಿಯತಮನಾದ ಆತ್ಮವೂ, ಈಶ್ವರನೂ ಆಗಿದ್ದಾನೆ.[೫]

ನಿತ್ಯದಲ್ಲಿ ಪತಿವ್ರತೆಯರಾದ ಸ್ತ್ರೀಯರು ಎಲ್ಲ ಮಂಗಳ ದ್ರವ್ಯಗಳನ್ನು ಹಾಗೂ ಮಂಗಳ ಚಿಹ್ನೆಗಳನ್ನೂ ಧರಿಸಬೇಕು ಮತ್ತು ಪತಿಯ ಇಚ್ಛೆಯಂತೆ ನಡೆದುಕೊಂಡು ಇಹಪರಗಳೆರಡನ್ನೂ ಸಾಧಿಸಿಕೊಳ್ಳಬೇಕು.

– ⊙ –

---

೪) ಪತಿರೇವ ಹಿ ನಾರೀಣಾಂ ದೈವತಂ ಪರಮಂ ಸ್ಮೃತಮ್ ॥ (೬-೧೮-೩೩)

೫) ತಸ್ಮಾತ್ ಪತಿವ್ರತಾನಾರ್ಯಃ ಶ್ರೇಯಸ್ಕಾಮಾ ಸುಮಧ್ಯಮೇ ।
ಯಜಂತೇಽನನ್ಯಭಾವೇನ ಪತಿಮಾತ್ಮಾನಮೀಶ್ವರಮ್ ॥ (೬-೧೮-೩೫)

# ESSENCE OF LIFE

**By Pt. Mahuli Gopalacharya**

Marriage is a sacred tie, Not secular pact.
Marriage is a religious rite, Not a public function.
Marriage is a deliberate union, Not a behavioral lapse.
Marriage is a deliberate decision, Not an in discriminate emotion.
Marriage is a permanent friendship, Not a passing acquaintance.
Marriage is a perpetual arrangement, Not a make shift adjustment.
Marriage is a psychological harmony, Not a physical get-together.

Love begets love
Love nourishes love
Love deepens love
Love forgives lapses
Love forgets wrongs.

Let our thoughts of mind meet each other,
Let our desires embrace each other,
Let our hearts throb & beat for each other,
Let harmony prevail in head, heart & soul.

**-Ṛgveda**

# THE HINDU MARRIAGE CEREMONY

The Hindu marriage is a sacrament based upon the ideal of union of two persons for spiritual developement, mutual love, and companionship service of God, and mankind. All ceremonies are therefore performed with invocation to the gods as witnesses of the pledge between the bride and bridegroom, to live together and work together for the spiritual and material welfare of themselves, their family and the entire universe.

The marriage ceremony as such is performed in three stages, the first of which consists of invocation to gods, reception of the bridegroom and blessings and good wishes of the elders.

In the second stage the parents of the bride make a solemn offering of their daughter to the bridegroom by placing her hand in the hand of the bridegroom, the brother of the bride also pours down parched rice to indicate his consent and approval of the marriage tie.

The bride and the bridegroom then take seven steps as the witness of their wedlock. At every step there is a promise from both the bride and the bridegroom to maintain the best and the most faithful relationship of heart, mind, soul and action between themselves. At the end of the seventh step the ceremony of marriage is completed. The bride and the

bridegroom then cast a glance on the polestar in the sky and take a vow of stead fast and everlasting companionship between themselves thro'out their life.

In the third stage of the marriage ceremony, there is again an invocation to the gods. The entire audience consisting of the elders, friends and wellwishers who bear witness to the marriage union give their blessings to the couple before dispersing.

All these ceremonies are based on the Vedic rituals as described in the Vedic texts and the Gṛhyasutras.

(This was published in the form of a pamphlet, the other day, by Dr. Rajendra prasad, President, Indian Union, on the occasion of his grand daughters' wedding at Rashtrapati Bhavan, NewDelhi.)

– ⊙ –

## ಅನುಬಂಧ - I

# ಶ್ರೀ ದೇವಪೂಜೆಯ ಕ್ರಮ

ವಿಧಿಪೂರ್ವಕವಾಗಿ ಪ್ರಾತರಾಹ್ನೀಕಗಳನ್ನು ಮುಗಿಸಿ ಸ್ನಾನಮಾಡಿ, ಸ್ನಾನಾಂಗ ತೀರ್ಥವನ್ನು ತೆಗೆದುಕೊಂಡು ನಾಮಮುದ್ರಾದಿಗಳನ್ನು ಧರಿಸಿ ಸಂಧ್ಯಾ, ತತ್ವನ್ಯಾಸ, ಮಾತೃಕಾನ್ಯಾಸ ಹಂಸಮಂತ್ರ ಸಮರ್ಪಣೆ, ಮೂಲಮಂತ್ರ, ಕೃಷ್ಣ ಮಂತ್ರಗಳನ್ನು ಮಾಡಿಕೊಳ್ಳಬೇಕು.

ನಂತರ ದೇವಪೂಜೆಗೆ ಬೇಕಾಗುವ ತುಲಸೀ, ಹೂ ಮೊದಲಾದ ಸಾಮಗ್ರಿಗಳನ್ನು ಅರ್ಘ್ಯೋದಕಗಳನ್ನು ತುಂಬಿಟ್ಟುಕೊಂಡು ಗಂಧಾಕ್ಷತೆಗಳನ್ನು ಸಿದ್ಧಪಡಿಸಿಕೊಂಡು (ಕಲಶಪೂಜೆ, ಶಂಖಪೂಜೆಗೆ ಪ್ರತ್ಯೇಕ ಗಂಧಾಕ್ಷತೆಗಳನ್ನಿಟ್ಟುಕೊಂಡು) ಪೂಜೆಯನ್ನು ಪ್ರಾರಂಭಿಸಬೇಕು.

### ದೇವರಿಗೆ ನಮಸ್ಕಾರ

ಓಂ ನಾರಾಯಣಾಯ ಪರಿಪೂರ್ಣ ಗುಣಾರ್ಣವಾಯ
ವಿಶ್ವೋದಯ ಸ್ಥಿತಿಲಯೋನ್ನಿಯತಿ ಪ್ರದಾಯ ।
ಜ್ಞಾನಪ್ರದಾಯ ವಿಬುಧಾಸುರ ಸೌಖ್ಯದುಃಖ
ಸತ್ಕಾರಣಾಯ ವಿತತಾಯ ನಮೋ ನಮಸ್ತೇ ॥
ವಂದೇ ವಿಷ್ಣುಂ ನಮಾಮಿ ಶ್ರಿಯಮಥಚ ಭುವಂ ಬ್ರಹ್ಮವಾಯೂ ಚ ವಂದೇ
ಗಾಯತ್ರೀಂ ಭಾರತೀಂ ತಾಮಪಿ ಗರುಡಮನಂತಂ ಭಜೇ ರುದ್ರದೇವಮ್ ।
ದೇವೀಂ ವಂದೇ ಸುಪರ್ಣೀಮಹಿಪತಿದಯಿತಾಂ ವಾರುಣೀಮಪ್ಯುಮಾಂ ತಾ
ಮಿಂದ್ರಾದೀನ್ ಕಾಮಮುಖ್ಯಾನಪಿ ಸಕಲ ಸುರಾಂಸ್ತದ್ಗುರೂನ್ ಮದ್ಗುರೂಂಶ್ಚ॥
ನಮೋಽಸ್ತು ತಾತ್ವಿಕಾದೇವಾಃ ವಿಷ್ಣುಭಕ್ತಿ ಪರಾಯಣಾಃ ।
ಧರ್ಮಮಾರ್ಗೇ ಪ್ರೇರಯಂತು ಭವಂತಃ ಸರ್ವವಿವಹಿ ॥

### ದ್ವಾರಪಾಲಕರಿಗೆ ನಮಸ್ಕಾರ

ಪೂರ್ವದ್ವಾರೇ ಶ್ರಿಯೈನಮಃ । ಜಯಾಯ ನಮಃ । ವಿಜಯಾಯ ನಮಃ ॥
ದಕ್ಷಿಣದ್ವಾರೇ ಶ್ರಿಯೈನಮಃ । ಬಲಾಯ ನಮಃ । ಪ್ರಬಲಾಯ ನಮಃ ॥
ಪಶ್ಚಿಮದ್ವಾರೇ ಶ್ರಿಯೈನಮಃ । ನಂದಾಯ ನಮಃ । ಸುನಂದಾಯ ನಮಃ ॥
ಉತ್ತರದ್ವಾರೇ ಶ್ರಿಯೈನಮಃ । ಕುಮುದಾಯನಮಃ । ಕುಮುದಾಕ್ಷಾಯ ನಮಃ॥
ವಾಯವಾಯಾಹಿ ದರ್ಶತೇ ಮೇ ಸೋಮಾ ಅರಂಕೃತಾಃ ತೇಷಾಂ ಪಾಹಿ ಶ್ರುಧೀ ಹವಂ॥

(ಈ ಮಂತ್ರ ಹೇಳುತ್ತ ದೇವರ ಬಾಗಿಲು ತೆರೆದು ಮೂರು ಸಲ ಚಪ್ಪಾಳೆ ತಟ್ಟಿ ದೇವರ ಗೃಹ ಪ್ರವೇಶಿಸಬೇಕು.)

**ದೀಪ ಪ್ರಜ್ವಾಲನೆ :**

ಓಂ ಅಗ್ನಿನಾಗ್ನಿಃ ಸಮಿಧ್ಯತೇ ಕವಿರ್ಗೃಹ ಪತಿರ್ಯುವಾ। ಹವ್ಯವಾಟ್ ಜುಹ್ವಾಸ್ಯಃ॥

(ಈ ಮಂತ್ರ ಹೇಳುತ್ತ ದೀಪ ಹಚ್ಚಬೇಕು)

**ಭೂತೋಚ್ಚಾಟನೆ ಮತ್ತು ದೇವತಾ ಪ್ರಾರ್ಥನೆ :** ಕೆಲವು ಪುಷ್ಪಗಳನ್ನು ಕೈಯಲ್ಲಿ ತೆಗೆದುಕೊಂಡು ದೇವರ ಮೇಲೆ ಹಾಕಿ ಮೂರು ಸಾರೆ ಚಪ್ಪಾಳೆ ತಟ್ಟಬೇಕು.

ಅಪಸರ್ಪಂತು ಯೇ ಭೂತಾ ಯೇ ಭೂತಾ ಭುವಿಸಂಸ್ಥಿತಾಃ ।
ಯೇ ಭೂತಾ ವಿಘ್ನಕರ್ತಾರಸ್ತೇ ನಸ್ಯಂತು ಆಜ್ಞಯಾ ಹರೇಃ ॥

ಹೇಳಿ ನಾರಾಚ ಮುದ್ರೆ ತೋರಿಸಬೇಕು.

ಓಂ ಯೇಭ್ಯೋ ಮಾತಾ ಮಧುಮತ್ ಪಿನ್ವತೇ ಪಯಃ
ಪೀಯೂಷಂ ದ್ಯೌರದಿತಿರದ್ರಿ ಬರ್ಹಾಃ ।
ಉಕ್ಥಶುಷ್ಮಾನ್ ವೃಷಭರಾನ್ ತ್ಸ್ವಪ್ನ ಸಸ್ತಾಂ ಆದಿತ್ಯಾಂ
ಅನುಮದಾ ಸ್ವಸ್ತಯೇ ॥

ಮಾನುಷೋ ಗಂಧ ಆಯಾತಿ ದೇವ ತತ್ ಕ್ಷಮ್ಯತಾಂ ಪ್ರಭೋ ॥
ಆಯತಾಭ್ಯಾಂ ವಿಶಾಲಾಭ್ಯಾಂ ಶೀತಲಾಭ್ಯಾಂ ಕೃಪಾನಿಧೇ ।
ಕರುಣಾರಸ ಪೂರ್ಣಾಭ್ಯಾಂ ಲೋಚನಾಭ್ಯಾಂ ವಿಲೋಕಯ ॥
ಅಪರಾಧ ಸಹಸ್ರಾಣಿ ಕ್ರಿಯಂತೇಽಹರ್ನಿಶಂ ಮಯಾ ।
ತಾನಿ ಸರ್ವಾಣಿ ಮೇ ದೇವ ಕ್ಷಮಸ್ವ ಪುರುಷೋತ್ತಮ ॥

ಎಂದು ಹೇಳಿ ಭಗವಂತನಿಗೂ ತನಗೂ ಮಧ್ಯದಲ್ಲಿ ಪರದೆಯನ್ನು ಕಲ್ಪಿಸಿಕೊಳ್ಳಬೇಕು.

ಪಾರಂ ಪರಂ ವಿಷ್ಣುರನಂತಪಾರಃ ಪರಃ ಪರಾಣಾಮಪಿ ಪಾರ ಪಾರಃ ।
ಸಬ್ರಹ್ಮಪಾರಃ ಪರಪಾರಭೂತಃ ಪರಃ ಪರೇಭ್ಯಃ ಪರಮಾರ್ಥರೂಪಿ ॥

ಈ ಸ್ತೋತ್ರವನ್ನು ಪಠಣ ಮಾಡಬೇಕು.

**ಘಂಟಾವಾದನ**

ಆಗಮಾರ್ಥಂತು ದೇವಾನಾಂ ಗಮನಾರ್ಥಂ ತು ರಕ್ಷಸಾಂ ।
ಕುರುಘಂಟಾರವಂ ತತ್ರ ದೇವತಾಹ್ವಾನಲಾಂಛನಮ್ ॥

**ನಿರ್ಮಾಲ್ಯ ವಿಸರ್ಜನ :** ಈ ಮೊದಲು ತನಗೂ ಭಗವಂತನಿಗೂ ಮಧ್ಯದಲ್ಲಿ ಕಲ್ಪಿಸಿಕೊಂಡಿದ್ದ ಪರದೆಯನ್ನು ತೆಗೆದು ಹಾಕಿ ನಿರ್ಮಾಲ್ಯ ವಿಸರ್ಜನೆಯನ್ನು ಮಾಡಬೇಕು.

ಓಂ ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ ।

ತನ್ನೋ ವಿಷ್ಣುಃ ಪ್ರಚೋದಯಾತ್ ।

ಈ ಮಂತ್ರ ಪಠಿಸುತ್ತ ಸಂಪುಷ್ಪವನ್ನು ತೆಗೆದು 'ಓಂ ನಮೋ ನಾರಾಯಣಾಯ' ಮೂಲಮಂತ್ರವನ್ನು ೧೨ ಸಾರೆ ಸಂಪುಷ್ಪದಲ್ಲಿ ಪಠಿಸಿ ಅರ್ಘ್ಯ, ಪಾದ್ಯ, ಆಚಮನ, ಮಧುಪರ್ಕ, ಪುನರಾಚಮನ ಹೀಗೆ ಪಂಚೋಪಚಾರಗಳನ್ನು ಸಮರ್ಪಿಸಬೇಕು. ನಿರ್ಮಾಲ್ಯ ತುಳಸೀ ಹೂಗಳನ್ನು ಎಡಭಾಗದ ಬುಟ್ಟಿಯಲ್ಲಿ ಹಾಕಬೇಕು.

ಶಾಲಿಗ್ರಾಮನಿವಾಸಾಯ ಕ್ಷೀರಾಬ್ಧಿ ಶಯನಾಯ ಚ ।
ಶ್ರೀಶೈಲಾದ್ರಿನಿವಾಸಾಯ ಶಿಲಾವಾಸಾಯ ತೇ ನಮಃ ॥

ಈ ಮಂತ್ರ ಹೇಳಿ ಅಭಿಷೇಕ ತಟ್ಟೆಯಲ್ಲಿ ಸಾಲಿಗ್ರಾಮ, ಸುದರ್ಶನ, ಚಕ್ರಾಂಕಿತ, ವಿಷ್ಣುಪಾದ, ಕೃಷ್ಣ ಪ್ರತಿಮೆ, ಶಿಂಶುಮಾರ ಪ್ರತಿಮೆ ಇವುಗಳನ್ನು ಇಟ್ಟುಕೊಳ್ಳಬೇಕು. ಕಲಶೋದಕಕ್ಕೆ 'ಓಂ ನಮೋ ನಾರಾಯಣಾಯ' ಮೂಲಮಂತ್ರವನ್ನು ಪಠಿಸಿ (೧೨ ಸಾರೆ) ಮೊದಲು ಅಭಿಷೇಕ ಮಾಡಿದ ನೀರನ್ನು ಅರ್ಘ್ಯ ಪಾತ್ರೆಗೆ (ಕಲಿ ವಿಸರ್ಜನೆಗಾಗಿ) ಹಾಕಬೇಕು.

ಓಂ ಸಹಸ್ರ ಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।

ಸ ಭೂಮಿಂ ವಿಶ್ವತೋ ವೃತ್ವಾ ಅತ್ಯತಿಷ್ಠದ್ದ ಶಾಂಗುಲಂ ॥

ಈ ಪುರುಷಸೂಕ್ತದಿಂದ ಶಂಖದಲ್ಲಿ ಕಲಶ ಜಲವನ್ನು ತುಂಬಿಸಿ ದೇವರಿಗೆ ಅಭಿಷೇಕ ಮಾಡಬೇಕು. (ಕಲಶದಲ್ಲಿ ಶಂಖವನ್ನು ಎದ್ದದೇ) ಈ ನಿರ್ಮಾಲ್ಯೋದಕವನ್ನು ಎರಡು ಭಾಗ ಮಾಡಿ ಒಂದನ್ನು ಶ್ರೀ ಮುಖ್ಯಪ್ರಾಣಾದಿಗಳ ಅಭಿಷೇಕಕ್ಕೆ ಇನ್ನೊಂದನ್ನು ಬ್ರಹ್ಮಯಜ್ಞಕ್ಕಾಗಿ ಇಟ್ಟುಕೊಳ್ಳಬೇಕು.

ಈಗ ಶಂಖಕ್ಕೆ ಅಭಿಷೇಕವನ್ನು ಶ್ರೀಸೂಕ್ತವನ್ನು ಹೇಳುತ್ತ ಮಾಡಬೇಕು.

ಓಂ ಹಿರಣ್ಯವರ್ಣಾಂ ಹರಿಣೀಂ ಸುವರ್ಣರಜತಸ್ರಜಾಂ ।

ಚಂದ್ರಾಂ ಹಿರಣ್ಮಯೀಂ ಲಕ್ಷ್ಮೀಂ ಜಾತವೇದೋ ಮಆವಹ ॥

ಈ ನೀರನ್ನು ಅರ್ಘ್ಯ ಪಾತ್ರೆಗೆ ಹಾಕಬೇಕು. ಶಂಖವನ್ನು ದೇವರ ಎಡಭಾಗದಲ್ಲಿ ಕೂರ್ಮದ ಮೇಲೆ ಇಡಬೇಕು. ಮುಖ್ಯ ಪ್ರಾಣದೇವರಿಗೆ ಶ್ರೀಹರಿವಾಯುಸ್ತುತಿ, ಪವಮಾನ ಮನ್ಯುಸೂಕ್ತ ಇತ್ಯಾದಿಗಳನ್ನು ಹೇಳುತ್ತ ಅಭಿಷೇಕ ಮಾಡಬೇಕು.

ಮಾತರ್ಮೇ ಮಾತರಿಶ್ವನ್ ಪಿತರತುಲಗುರೋ ಭ್ರಾತರಿಷ್ಟಾಪ್ತಬಂಧೋ
ಸ್ವಾಮಿನ್ ಸರ್ವಾಂತರಾತ್ಮನ್ನಜರಜರಯಿತರ್ಜನ್ಮಮೃತ್ಯಾಮಯಾನಾಮ್ ।
ಗೋವಿಂದೇ ದೇಹಿ ಭಕ್ತಿಂ ಭವತಿ ಚ ಭಗನ್ನೂರ್ಜಿತಾಂ ನಿರ್ನಿಮಿತ್ತಾಂ
ನಿರ್ವ್ಯಾಜಾಂ ನಿಶ್ಚಲಾಂ ಸದ್ಗುಣಗಣ ಬೃಹತೀಂ ಶಾಶ್ವತೀಮಾಶುದೇವ ॥

ಈ ತೀರ್ಥವನ್ನು ತೆಗೆದಿಟ್ಟುಕೊಳ್ಳಬೇಕು. ಪ್ರಾಣದೇವರ ಪ್ರತಿಮೆಯನ್ನು ಒರೆಸಿ ದೇವರ ಬಲಕ್ಕೆ ಇಡಬೇಕು. ಗರುಡ ದೇವತಾಭ್ಯೋನಮಃ, ಶೇಷದೇವತಾಭ್ಯೋನಮಃ ಎಂದು ಹೇಳುತ್ತ ಗರುಡ ಶೇಷಾದಿಗಳಿಗೆ ಅಭಿಷೇಕಮಾಡಿ ಆ ನೀರನ್ನು ಅರ್ಘ್ಯ ಪಾತ್ರೆಗೆ ಹಾಕಬೇಕು. ನಂತರ ಶ್ರೀ ಟೀಕಾಕೃತ್ಪಾದರ, ಶ್ರೀರಾಯರ ವೃಂದಾವನಗಳಿಗೆ ಅಭಿಷೇಕವನ್ನು ಆಯಾಸ್ತೋತ್ರಗಳನ್ನು ಹೇಳುತ್ತ ಮಾಡಿ ಆ ನೀರನ್ನು ಅರ್ಘ್ಯಪಾತ್ರೆಗೆ ಹಾಕಬೇಕು.

(ಈಗ ಕೆಲವರು ಬ್ರಹ್ಮಯಜ್ಞವನ್ನು ಮಾಡುವುದುಂಟು, (ಏಕಾದಶಿ, ಕೃಷ್ಣಾಷ್ಟಮೀ ಹೊರತು ಪಡಿಸಿ) ಅವರವರ ಗುರು ಹಿರಿಯರ ಸಂಪ್ರದಾಯದಂತೆ ಮಾಡಬಹುದು.)

ಗರುಡ ಶೇಷಾದಿಗಳನ್ನು ಒರೆಸಿ ದೇವರ ಕೆಳಭಾಗದಲ್ಲಿ ಇಡಬೇಕು.

**ಮಂಟಪಧ್ಯಾನ**

ಉತ್ತಪ್ತೋಜ್ವಲ ಕಾಂಚನೇನ ರಚಿತಂ ತುಂಗಾಂಗರಂಗಸ್ಥಲಂ ।
ಶುದ್ಧ ಸ್ಫಾಟಿಕ ಭಿತ್ತಿಕಾ ವಿಲಸಿತೈಃ ಸ್ತಂಭೈಶ್ಚಹೈಮೈಃ ಶುಭೈಃ ॥
ದ್ವಾರೈಶ್ಚಾಮರ ರತ್ನರಾಜಖಚಿತೈಃ ಶೋಭಾವಹಂ ಮಂಡಿತೈಃ ।
ತತ್ರಾನ್ಯೈರಪಿ ಶಂಖ ಪದ್ಮ ಧವಲೈಃ ಪ್ರಭ್ರಾಜಿತಂ ಸ್ವಸ್ತಿಕೈಃ ॥

ಮುಕ್ತಾಜಾಲ ವಿಲಂಬಿ ಮಂಟಪಯುತಂ ವಜ್ರೈಶ್ಚಸೋಪಾನಕೈಃ ।
ನಾನಾರತ್ನ ವಿನಿರ್ಮಿತೈಶ್ಚ ಕಲಶೈರತ್ಯಂತ ಶೋಭಾವಹಂ ॥
ಮಾಣಿಕ್ಯೋಜ್ವಲ ದೀಪ ದೀಪ್ತಿ ವಿಲಸಲ್ಲಕ್ಷ್ಮೀ ವಿಲಾಸಾಸ್ಪದಂ ।
ಧ್ಯಾಯೇನ್ಮಂಟಪಮರ್ಚನೇಷು ಸಕಲೈರೇವಂ ವಿಧೈಃ ಸಾಧಕಃ (ಕೈಃ) ॥

**ಪೂಜಾಸಂಕಲ್ಪ** : ಆಚಮ್ಯ ಕೇಶವಾಯಸ್ವಾಹಾ ...... ಶ್ರೀಕೃಷ್ಣಾಯ ನಮಃ ॥ ಪ್ರಾಣಾಯಾಮಃ । ಪ್ರಣವಸ್ಯ ..... ಭೂರ್ಭುವಸ್ವರೋಂ ॥ ಶ್ರೀಗೋವಿಂದ ಗೋವಿಂದ ..... ಶುಭತಿಥೌ ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ವಿಷ್ಣುಪ್ರೇರಣಯಾ ಶ್ರೀ ವಿಷ್ಣುಪ್ರೀತ್ಯರ್ಥಂ ಭಗವತೋವೀರ್ಯೇಣ, ಭಗವತೋಬಲೇನ, ಭಗವತಸ್ತೇಜಸಾ, ಭಗವತಃ ಕರ್ಮಣಾ, ಭಗವತಾ ಪ್ರೇರಿತೋಹಂ ಭಗವತಃ ಶ್ರೀಲಕ್ಷ್ಮೀನಾರಾಯಣಸ್ಯ ಯಥಾ ಮಿಲಿತ ಉಪಚಾರದ್ರವ್ಯೈಃ ಷೋಡಶೋಪಚಾರ ಪೂಜಾಂ ಮಯಿಸ್ಥಿತಃ ಮುಖ್ಯಪ್ರಾಣಃ ಕರೋತಿ ತತ್ಪ್ರೇರಿತೋಹಂ ಚ ಕರಿಷ್ಯೇ ॥

ಭಗವನ್ ಯ್ಯನ್ಮಯಾ ಕರ್ಮ ಶುಭಂ ಕಾರಯಸೇ ಪ್ರಭೋ ।
ತತ್ ಸರ್ವಂ ವಿಷ್ಣುಪೂಜಾಸ್ತು ತವದೇವಪ್ರಸಾದತಃ ॥

**ಕಲಶ ಪೂಜೆ** : ಕಲಶಜಲದಲ್ಲಿ ತುಲಸೀ ಪತ್ರವನ್ನು ಹಾಕಿ ಕಲಶಕ್ಕೆ ಗಂಧ, ಅಕ್ಷತೆಗಳನ್ನು ಹಚ್ಚಬೇಕು. ಕಲಶವನ್ನು ಕೈಯಿಂದ ಮುಟ್ಟಿ ಹೀಗೆ ಹೇಳಬೇಕು.

ಕಲಶಸ್ಯ ಮುಖೇ ವಿಷ್ಣುಃ ಕಂಠೇರುದ್ರಃ ಸಮಾಶ್ರಿತಃ ।
ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ ॥
ಕುಕ್ಷೌತು ಸಾಗರಾಸ್ಸರ್ವೇ ಸಪ್ತದ್ವೀಪಾ ವಸುಂಧರಾ ।
ಋಗ್ವೇದೋಽಥ ಯಜುರ್ವೇದಃ ಸಾಮವೇದೋ ಹ್ಯಥರ್ವಣ ॥
ಅಂಗೈಶ್ಚ ಸಹಿತಾಃ ಸರ್ವೇ ಕಲಶಂ ತು ಸಮಾಶ್ರಿತಾಃ ।
ಶಾಂತಿಃ ಪುಷ್ಟಿಶ್ಚ ಗಾಯತ್ರೀ ಸಾವಿತ್ರೀ ಚ ಸರಸ್ವತಿ *
ಆಯಾಂತು ದೇವಪೂಜಾರ್ಥಂ ಅಭಿಷೇಕಾರ್ಥಮಾದರಾತ್ ।
ಸರ್ವೇ ಸಮುದ್ರಾಃ ಸರಿತಸ್ತೀರ್ಥಾನಿ ಜಲದಾ ನದಾಃ ॥
ಆಯಾಂತು ದೇವಪೂಜಾರ್ಥಂ ದುರಿತಕ್ಷಯಕಾರಕಾಃ ॥
ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತೀ ॥
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ।
ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ ।
ಆಗಚ್ಛಂತು ಪವಿತ್ರಾಣಿ ಪೂಜಾ ಕಾಲೇ ಸದಾ ಹರೇಃ ॥

ಓಂ ಇಮಂ ಮೇ ಗಂಗೇ ಯಮುನೇ ಸರಸ್ವತಿಶುತುದ್ರಿಸ್ತೋಮಂ ಸಚತಾ ಪರುಷ್ಣ್ಯಾ ।
ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾರ್ಜೀಕೀಯೇ ಶೃಣುಹ್ಯಾಸುಷೋಮಯಾ ॥

ಏಕ ಪಂಚಾಶದ್ವರ್ಣಾನಾಂ ಚತುರ್ವಿಂಶತಿ ಮೂರ್ತಯಃ ।
ಆತ್ಮಾದ್ಯಾವಾಸುದೇವಾದ್ಯಾ ವಿಶ್ವಾದ್ಯಾ ಮತ್ಸ್ಯಕಚ್ಛಪೌ ॥
ಕೋಲೋ ನೃಸಿಂಹಃ ಸವಟುರ್ಜಾಮದಗ್ನ್ಯರಘೂದ್ವಹೌ ।
ವಾಶಿಷ್ಠ ಯಾದವೌ ಕೃಷ್ಣವಾತ್ರೇಯೋ ಬುದ್ಧಕಲ್ಕಿನೌ ॥
ಶಿಂಶುಮಾರಶ್ಚೇತಿ ಶತಂ ಕಲಾಃ ಕಲಶದೇವತಾಃ ।
ಆಹೂಯ ಪೂಜಯೇದೇತಾಃ ಸ್ನಾನೀಯ ಕಲಶೇಬುಧಃ ॥

ಸರ್ವತೀರ್ಥಮಯೋ ಯಸ್ಮಾತ್ ಸರ್ವಕ್ಷೇತ್ರ ಮಯೋಯತಃ ।
ಅತೋ ಹರಿಪ್ರಿಯೋಽಸಿತ್ವಂ ಪೂರ್ಣಕುಂಭ ನಮೋಸ್ತುತೇ ॥

ನಿರ್ವಿಷೀಕರಣಾರ್ಥಂ ತಾರ್ಕ್ಷ್ಯಮುದ್ರಾಂ ಪ್ರದರ್ಶಯಾಮಿ ।
ಅಮೃತೀಕರಣಾರ್ಥಂ ಧೇನುಮುದ್ರಾಂ ಪ್ರದರ್ಶಯಾಮಿ ।
ಪವಿತ್ರೀಕರಣಾರ್ಥಂ ಶಂಖಮುದ್ರಾಂ ಪ್ರದರ್ಶಯಾಮಿ ।
ದಿಗ್ಬಂಧನಾರ್ಥಂ ಗದಾ ಮುದ್ರಾಂ ಪ್ರದರ್ಶಯಾಮಿ ।
ಸಂರಕ್ಷಣಾರ್ಥಂ ಚಕ್ರಮುದ್ರಾಂ ಪ್ರದರ್ಶಯಾಮಿ ।

---

* ಅತ್ರ ಗಾಯತ್ರೀ ಸಾವಿತ್ರೀ ಶಾಂತಿಃ ಪುಷ್ಟಿಕರೀತಥಾ (ಪಾಠಾಂತರ)

# ಕಲಶಪೂಜೆ, ಶಂಖಪೂಜೆ ಹಾಗೂ ನೈವೇದ್ಯ ಕಾಲದಲ್ಲಿ ತೋರಿಸತಕ್ಕ ತಾರ್ಕ್ಷ್ಯಾದಿ ಸುದರ್ಶನಾಂತ ೫ ಮುದ್ರೆಗಳು



೧. ತಾರ್ಕ್ಷ್ಯಮುದ್ರಾ



೨. ಧೇನುಮುದ್ರಾ



೩. ಶಂಖಮುದ್ರಾ



೪. ಗದಾಮುದ್ರಾ



೫. ಸುದರ್ಶನಮುದ್ರಾ

# ನೈವೇದ್ಯ ಪದಾರ್ಥಗಳಿಗೆ ಅಭಿಮಾನಿ ದೇವತೆಗಳು

| ಪದಾರ್ಥದ ಹೆಸರು | ಅಭಿಮಾನಿ ದೇವತೆ | ನಿಯಾಮಕ ಭಗವದ್ರೂಪ |
|---|---|---|
| ಅನ್ನ | ಚಂದ್ರ | ಕೇಶವ |
| ಪರಮಾನ್ನ | ಭಾರತೀ | ನಾರಾಯಣ |
| ಭಕ್ಷ್ಯಗಳು | ಸೂರ್ಯ | ಮಾಧವ |
| ತುಪ್ಪ | ಲಕ್ಷ್ಮೀ | ಗೋವಿಂದ |
| ಹಾಲು | ಸರಸ್ವತೀ | ವಿಷ್ಣು |
| ಮಂಡಿಗೆ | ಚತುರ್ಮುಖ ಬ್ರಹ್ಮ | ಮಧುಸೂದನ |
| ಬೆಣ್ಣೆ | ವಾಯು | ತ್ರಿವಿಕ್ರಮ |
| ಮೊಸರು | ವರುಣ | ವಾಮನ |
| ತೊವ್ವೆ | ಗರುಡ | ಶ್ರೀಧರ |
| ಸೊಪ್ಪು | ಮಿತ್ರ ಸೂರ್ಯ | ಹೃಷೀಕೇಶ |
| ಕಾಯಿಪಲ್ಲೆ | ಶೇಷ | ಪದ್ಮನಾಭ |
| ಹುಳಿಪದಾರ್ಥ | ಗೌರೀ | ದಾಮೋದರ |
| ಹುಳಿಯಿಲ್ಲದ ಪದಾರ್ಥಗಳು | ರುದ್ರ | ಸಂಕರ್ಷಣ |
| ಸಕ್ಕರೆ, ಬೆಲ್ಲ | ಇಂದ್ರ | ವಾಸುದೇವ |
| ವ್ಯಂಜನ ಪದಾರ್ಥಗಳು | ಬೃಹಸ್ಪತಿ | ಪ್ರದ್ಯುಮ್ನ |
| ಕಟುದ್ರವ್ಯಗಳು | ಯಮ | ಅನಿರುದ್ಧ |
| ಇಂಗು, ಯಾಲಕ್ಕಿ, ಕರ್ಪೂರ | ಮನ್ಮಥ | ಪುರುಷೋತ್ತಮ |
| ಕರಿದ ಪದಾರ್ಥಗಳು | ಜಯಂತ | ಅಧೋಕ್ಷಜ |
| ಎಳ್ಳು, ಉದ್ದು | ದಕ್ಷ | ನಾರಸಿಂಹ |
| ಉದ್ದಿನ ಭಕ್ಷ್ಯಗಳು | ಸ್ವಾಯಂಭುವಮನು | ಅಚ್ಯುತ |
| ಉಪ್ಪು | ನಿರ್ಋತಿ | ಜನಾರ್ದನ |
| ಹಣ್ಣು, ಹಣ್ಣಿನ ರಸ | ಅಹಂಕಾರಿಕ ಪ್ರಾಣ | ಉಪೇಂದ್ರ |
| ತಾಂಬೂಲ | ಗಂಗಾ | ಶ್ರೀಹರಿ |
| ಸ್ವಾದೂದಕ | ಬುಧ | ಶ್ರೀಕೃಷ್ಣ |

## ಷಡ್ರಸಗಳ ಅಭಿಮಾನಿ ದೇವತೆಗಳು

೧. ಮಧುರ – ರಮಾ, ವಾಯು

೨. ಕಷಾಯ – ಸೌಪರ್ಣೀ, ಶಚೀ

೩. ಆಮ್ಲ – ಭೂದೇವಿ, ಸರಸ್ವತೀ

೪. ತಿಕ್ತ – ಉಮಾ ಶಾಮಲಾ

೫. ಕಟು – ಸೌಪರ್ಣೀ, ಸೂರ್ಯ, ವರುಣ

೬. ಲವಣ – ಉದಾನ

ಈಗ ಕಲಶವನ್ನು ಮುಟ್ಟಿ 'ಓಂ ನಮೋ ನಾರಾಯಣಾಯ' ಮಂತ್ರವನ್ನು ಹನ್ನೆರಡು ಸಾರೆ ಜಪಿಸಬೇಕು ಮತ್ತು ಅನೇನ ಕಲಶಾರಾಧನೇನ ಭಗವಾನ್ ಶ್ರೀಲಕ್ಷ್ಮೀನಾರಾಯಣ ಪ್ರೀಯತಾಂ ಎಂದು ಹೇಳಬೇಕು.

**ಶಂಖ ಪೂಜೆ :** ಕಲಶದಲ್ಲಿಯ ನೀರನ್ನು ಶಂಖದಲ್ಲಿ ತುಂಬಿಸಿ ತುಲಸೀ, ಪುಷ್ಪಗಳನ್ನು ಏರಿಸಬೇಕು. ಮೇಲೆ ಹೇಳಿದ ತಾರ್ಕ್ಷ್ಯಾದಿ ಪಂಚ ಮುದ್ರೆಗಳನ್ನು ತೋರಿಸಿ. ಕೈಯಿಂದ ಶಂಖವನ್ನು ಮುಟ್ಟಿ 'ಓಂ ನಮೋ ನಾರಾಯಣಾಯ' ಈ ಮಂತ್ರವನ್ನು ೧೨ ಸಾರೆ ಜಪಿಸಬೇಕು.

ತ್ವಂ ಪುರಾ ಸಾಗರೋತ್ಪನ್ನೋ ವಿಷ್ಣುನಾ ವಿಧೃತಃ ಕರೇ ।
ನಮಿತಃ ಸರ್ವದೇವೈಶ್ಚ ಪಾಂಚಜನ್ಯ ನಮೋಽಸ್ತುತೇ ॥
ಶಂಖಂ ಚಂದ್ರಾರ್ಕ ದೈವತ್ಯಂ ಮಧ್ಯೇ ವರುಣ ದೈವತಂ ।
ಪೃಷ್ಠೇ ಪ್ರಜಾಪತಿಂ ವಿಂದ್ಯಾದಗ್ರೇ ಗಂಗಾ ಸರಸ್ವತೀ ॥
ತ್ರೈಲೋಕ್ಯೇ ಯಾನಿ ತೀರ್ಥಾನಿ ವಾಸುದೇವಸ್ಯ ಚಾಜ್ಞಯಾ ।
ಶಂಖೇ ತಿಷ್ಠಂತಿ ವಿಪ್ರೇಂದ್ರ ತಸ್ಮಾತ್ ಶಂಖಂ ಪ್ರಪೂಜಯೇತ್ ॥

ಧ್ಯಾನ, ಆವಾಹನ, ಅರ್ಘ್ಯ, ಪಾದ್ಯ, ಮಧುಪರ್ಕ, ಆಚಮನ ಗಂಧ, ಪುಷ್ಪ, ಹೀಗೆ ಎಂಟು ವಿಧದ ಪೂಜೆಯನ್ನು 'ಶಂಖದೇವತಾಭ್ಯೋನಮಃ' ಮಂತ್ರದಿಂದ ಮಾಡಬೇಕು.

(ಶಂಖೋದಕವನ್ನು ತನಗೂ ಪೂಜಾದ್ರವ್ಯಗಳಿಗೂ ಪ್ರೋಕ್ಷಿಸಬೇಕು)

ಓಂ ಪಾಂಚಜನ್ಯಾಯ ವಿದ್ಮಹೇ ಪಾವಮಾನಾಯಧೀಮಹಿ ತನ್ನಃ ಶಂಖಃಪ್ರಚೋದಯಾತ್।
ಅನೇನ ಶಂಖಪೂಜನೇನ ಭಗವಾನ್ ಶ್ರೀ ಲಕ್ಷ್ಮೀನಾರಾಯಣಃ ಪ್ರೀಯತಾಂ ।
ಎಂದು ಹೇಳಬೇಕು.

**ಪೀಠ ಪೂಜೆ**

ವಿಷ್ಣೋರಾಸನ ಭೂತಾಯ ದಿವ್ಯರತ್ನಮಯಾಯ ಚ ।
ಪ್ರಧಾನ ಪುರುಷೇಶಾಯ ಮಹಾಪೀಠಾಯ ತೇನಮಃ ॥

**ಷೋಡಶೋಪಚಾರ ಪೂಜೆ :** ಸಾಲಿಗ್ರಾಮಾದಿಗಳನ್ನು ಸ್ನಾನ ಪಾತ್ರೆಯಲ್ಲಿ ಇಟ್ಟು ಅರ್ಘ್ಯ ಪಾದ್ಯಾದಿಗಳನ್ನು ಸಲ್ಲಿಸಬೇಕು.

**೧. ಅರ್ಘ್ಯ :**

ಓಂ ತ್ರೈಲೋಕ್ಯಪತೀನಾಂ ಪತಯೇ ದೇವದೇವಾಯ ಹೃಷಿಕೇಶಾಯ ವಿಷ್ಣವೇನಮಃ।
ಓಂ ನಮೋ ನಾರಾಯಣಾಯ ಲಕ್ಷ್ಮೀಹಸ್ತೇನ ಅರ್ಘ್ಯಂ ಸಮರ್ಪಯಾಮಿ ॥

**೨. ಪಾದ್ಯ :**

ಓಂ ಪಾದ್ಯಂ ಪಾದಯೋರ್ದೇವ ಪದ್ಮನಾಭ ಸನಾತನ ।
ವಿಷ್ಣೋ ಕಮಲಪತ್ರಾಕ್ಷ ಗೃಹಾಣ ಮಧುಸೂದನ ॥
ಓಂ ನಮೋ ನಾರಾಯಣಾಯ ಸರಸ್ವತೀ ಹಸ್ತೇನ ಪಾದ್ಯಂ ಸಮರ್ಪಯಾಮಿ ॥

**೩. ಆಚಮನ :**

ಓಂ ಮಂದಾಕಿನ್ಯಾಃ ಸಿತಂವಾರಿ ಸರ್ವಪಾಪಹರಂ ಶಿವಮ್ ।
ಗೃಹಾಣ ಆಚಮನೀಯಂ ತ್ವಂ ಮಯಾಭಕ್ತ್ಯಾ ನಿವೇದಿತಮ್ ॥
ಓಂ ನಮೋ ನಾರಾಯಣಾಯ ರತಿಹಸ್ತೇನ ಆಚಮನೀಯಂ ಸಮರ್ಪಯಾಮಿ ॥

**೪. ಮಧುಪರ್ಕ :**

ಓಂ ಮಧುಪರ್ಕಂ ಮಹಾದೇವ ಬ್ರಹ್ಮಾದ್ಯೈಃ ಕಲ್ಪಿತಂ ತವ ।
ಮಯಾನಿವೇದಿತಂ ಭಕ್ತ್ಯಾ ಗೃಹಾಣ ಪುರುಷೋತ್ತಮ ॥
ಓಂ ನಮೋ ನಾರಾಯಣಾಯ ಪಿತಾಮಹ ಹಸ್ತೇನಮಧುಪರ್ಕಂ ಸಮರ್ಪಯಾಮಿ॥

**೫. ಪುನರಾಚಮನ :**

ಮಂದಾಕಿನ್ಯಾಃ ಸಿತಂ ವಾರಿ ಸರ್ವಪಾಪಹರಂ ಶಿವಮ್ ।
ಗೃಹಾಣ ಆಚಮನೀಯಂ ತ್ವಂ ಮಯಾಭಕ್ತ್ಯಾ ನಿವೇದಿತಮ್ ॥
ಓಂ ನಮೋ ನಾರಾಯಣಾಯ ಶಾಂತಿ ಹಸ್ತೇನ ಪುನರಾಚಮನೀಯಂ ಸಮರ್ಪಯಾಮಿ ॥

**೬. ಸ್ನಾನ :**

ಪಂಚಾಮೃತ ಅಭಿಷೇಕವನ್ನು ಮಾಡುವುದಿದ್ದರೆ ಅದನ್ನು ಮಾಡಿ ಮುಗಿಸಿ ಶುದ್ಧೋದಕ ಸ್ನಾನವನ್ನು ಮಾಡಿಸಬೇಕು.

ಓಂ ತ್ವಮಾಪಃ ಪೃಥಿವೀ ಚೈವ ಜ್ಯೋತಿಸ್ತ್ವಂ ವಾಯುರೇವ ಚ ।
ಲೋಕೇಶ ವೃತ್ತಿಮಾತ್ರೇಣ ವಾರಿಣಾ ಸ್ನಾಪಯಾಮ್ಯಹಮ್ ॥
ಓಂ ನಮೋ ನಾರಾಯಣಾಯ ವರುಣ ಹಸ್ತೇನ ಸ್ನಾನಂ ಸಮರ್ಪಯಾಮಿ ॥

ಶಂಖದಿಂದ ದೇವರಿಗೆ ಪುರುಷ ಸೂಕ್ತದಿಂದ ಘಂಟಾವಾದನ ಪೂರ್ವಕ ಅಭಿಷೇಕ ಮಾಡಿ, ಸ್ವಾದೂದಕ ಅಭಿಷೇಕ ಮಾಡಿ ದೇವರನ್ನು ಒರೆಸಿ ಸಂಪುಷ್ಟದಲ್ಲಿ ಇಡಬೇಕು.

**೭. ವಸ್ತ್ರ :**

ಓಂ ದೇವತತ್ತ್ವ ಸಮಾಯುಕ್ತ ಯಜ್ಞವರ್ಣ ಸಮನ್ವಿತ ।
ಸ್ವರ್ಣವರ್ಣ ಪ್ರಭೇ ದೇವ ವಾಸಸೀ ತವ ಕೇಶವ ॥
ಓಂ ನಮೋ ನಾರಾಯಣಾಯ ವಸ್ತ್ರೋಪವಸ್ತ್ರಾರ್ಥೇ ತುಲಸೀಪತ್ರಂ ಸಮರ್ಪಯಾಮಿ॥

**೮. ಭೂಷಣ :**

ಓಂ ದಿವ್ಯರತ್ನ ಸಮಾಯುಕ್ತ ವಹ್ನಿಭಾನು ಸಮಪ್ರಭ ।
ಗಾತ್ರಾಣಿ ತವ ಶೋಭಂತು ಸಾಲಂಕಾರಾಣಿ ಮಾಧವ ॥
ಓಂ ನಮೋ ನಾರಾಯಣಾಯ ಭೂಷಣಾರ್ಥೇ ತುಲಸೀ ಪತ್ರಂ ಸಮರ್ಪಯಾಮಿ॥

**೯. ಉಪವೀತ :**

ಓಂ ಋಗ್ಯಜುಃಸಾಮ ಮಂತ್ರೇಣ ತ್ರಿವೃತಂ ಪದ್ಮಯೋನಿನಾ ।
ಸಾವಿತ್ರೀ ಗ್ರಂಥಿ ಸಂಯುಕ್ತಮುಪನೀತಂ ತವಾರ್ಪಯೇ ॥
ಓಂ ನಮೋ ನಾರಾಯಣಾಯ ಉಪವೀತಾರ್ಥೇ ತುಲಸೀ ಪತ್ರಂ ಸಮರ್ಪಯಾಮಿ ।

**೧೦. ಆಸನ :**

ಓಂ ಕರ್ಣಿಕಾಯಾಂ ಸುಖೀಶೇತ್ರ ಪದ್ಮ ಕಲ್ಪಿತ ಮಾನಸಮ್ ।
ಸರ್ವಸತ್ವ ಹಿತಾರ್ಥಾಯ ತಿಷ್ಠ ತ್ವಂ ಮಧುಸೂದನ ॥
ಓಂ ನಮೋ ನಾರಾಯಣಾಯ ಆಸನಂ ಸಮರ್ಪಯಾಮಿ ।

**೧೧. ಗಂಧ :**

ಓಂ ಶರೀರಂ ತೇ ನ ಜಾನಾಮಿ ಚೇಷ್ಟಾಂ ಚೈವ ಚ ಕೇಶವ ।
ಮಯಾ ನಿವೇದಿತೋ ಗಂಧಃ ಪ್ರತಿಗೃಹ್ಯ ವಿಲಿಪ್ಯತಾಮ್ ॥
ಓಂ ನಮೋ ನಾರಾಯಣಾಯ ಗಂಧಂ ಸಮರ್ಪಯಾಮಿ । *

**೧೨. ಪುಷ್ಪ :**

ಓಂ ಮಾಲ್ಯಾದೀನಿ ಸುಗಂಧೀನಿ ಮಾಲತ್ಯಾದೀನಿ ವೈಪ್ರಭೋ ।
ಮಯಾ ಹೃತಾನಿ ಪುಷ್ಪಾಣಿ ಪೂಜಾರ್ಥಂ ಪ್ರತಿಗೃಹ್ಯತಾಮ್ ॥
ಓಂ ನಮೋ ನಾರಾಯಣಾಯ ಪುಷ್ಪಾಣಿ ಸಮರ್ಪಯಾಮಿ ।

(ವೇದಾಂತ ಸೂತ್ರ (ಬ್ರಹ್ಮ ಸೂತ್ರ) ವಿಷ್ಣುಸಹಸ್ರ ನಾಮಗಳನ್ನು ಹೇಳುತ್ತ ತುಲಸಿಯನ್ನು ಪುಷ್ಪಗಳನ್ನು ಸಮರ್ಪಿಸಬೇಕು.)

**೧೩. ಧೂಪ :**

ಓಂ ವನಸ್ಪತಿರಸೋದ್ಭೂತೋ ಗಂಧಾಢ್ಯೋಗಂಧಉತ್ತಮಃ ।
ಆಘ್ರೇಯಃ ಸರ್ವದೇವಾನಾಂ ಧೂಪೋಽಯಂ ಪ್ರತಿಗೃಹ್ಯತಾಮ್ ।
ಓಂ ನಮೋ ನಾರಾಯಣಾಯ ಧೂಪಂ ಸಮರ್ಪಯಾಮಿ ।

(ಧೂಪವನ್ನು ಬಾಯಿಂದ ಪ್ರಜ್ವಲಿಸದೇ ಮಾಡಬೇಕು)

**೧೪. ದೀಪ :**

ಓಂ ಸಾಜ್ಯಂ ತ್ರಿವರ್ತಿ ಸಂಯುಕ್ತಂ ವಹ್ನಿನಾ ಯೋಜಿತಂ ಮಯಾ ।
ದೀಪಂ ಗೃಹಾಣ ದೇವೇಶ ತ್ರೈಲೋಕ್ಯ ತಿಮಿರಾಪಹ ॥
ಭಕ್ತ್ಯಾದೀಪಂ ಪ್ರಯಚ್ಛಾಮಿ ದೇವಾಯ ಪರಮಾತ್ಮನೇ ।
ತ್ರಾಹಿಮಾಂ ನರಕಾದ್ ಘೋರಾದ್ದೀಪಜ್ಯೋತಿರ್ನಮೋಽಸ್ತುತೇ ॥
ಓಂ ನಮೋ ನಾರಾಯಣಾಯ ಏಕಾರ್ತಿಕ್ಯ ದೀಪಂ ಸಮರ್ಪಯಾಮಿ ।

(ಮೂರು ಬತ್ತಿಗಳಿಂದ ಮಾಡಬೇಕು)

**೧೫. ನೈವೇದ್ಯ :**

ನೈವೇದ್ಯ ಪದಾರ್ಥಗಳನ್ನು ಶ್ರೀಕಾರ ಅಥವಾ ಓಂಕಾರ ಬರೆದ ಮಂಡಲಗಳಲ್ಲಿ ಇಟ್ಟು, ಗಟ್ಟಿಯಾದ ತುಪ್ಪವನ್ನು ಹಾಕಿ (ಬಡಿಸಿ), ಎಲ್ಲ ಪದಾರ್ಥಗಳಿಗೆ ತುಲಸಿಯನ್ನು

---

* ಗಂಧ, ಧೂಪ, ದೀಪ ಇತ್ಯಾದಿ ಸಮರ್ಪಣೆಯ ನಂತರ ಪ್ರತಿಸಾರೆ ಕೈ ತೊಳೆದುಕೊಳ್ಳಬೇಕು.

ಹಾಕಿ (ತುಪ್ಪವೊಂದನ್ನು ಬಿಟ್ಟು) ನೈವೇದ್ಯಕ್ಕೆ ಪ್ರೋಕ್ಷಿಸತಕ್ಕ ನೀರನ್ನು ತುಲಸೀ ಸಹಿತ ಕೈಯಲ್ಲಿ ಹಾಕಿಕೊಂಡು 'ಓಂ ನಮೋ ನಾರಾಯಣಾಯ' ಎಂದು ಎಂಟು ಸಲ ಹೇಳಿ ಅಭಿಮಂತ್ರಿಸಿ ಓಂ ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ । ತನ್ನೋ ವಿಷ್ಣುಃ ಪ್ರಚೋದಯಾತ್ । ಮಂತ್ರದಿಂದ ಪ್ರೋಕ್ಷಿಸಬೇಕು. ನೈವೇದ್ಯವನ್ನು ಮುಟ್ಟಿ,

ಸೌವರ್ಣೈಃ ಸ್ಥಾಲಿವರ್ಯೈರ್ಮಣಿಗಣಖಚಿತೈರ್ಗೋಘೃತಾಕ್ತಾನ್ ಸುಪಕ್ವಾನ್ ।
ಭಕ್ಷ್ಯಾನ್ ಭೋಜ್ಯಾಂಶ್ಚ ಲೇಹ್ಯಾನಪಿ ಸಕಲ ಮಹಚ್ಚೋಷ್ಯಮನ್ನಂ ನಿಧಾಯ ॥
ನಾನಾ ಶಾಕೈರುಪೇತಂ ಸಮಧುದಧಿಘೃತಂಕ್ಷೀರಪಾನೀಯಯುಕ್ತಂ ।
ತಾಂಬೂಲಂ ಚಾಪಿ ವಿಷ್ಣೋಃ ಪ್ರತಿದಿವಸಮಹಂ ಮಾನಸೇ ಚಿಂತಯಾಮಿ ॥

ಮಂತ್ರ ಹೇಳಿ,

ನಿರ್ವಿಷೀಕರಣಾರ್ಥಂ ತಾರ್ಕ್ಷ್ಯ ಮುದ್ರಾಂ ಪ್ರದರ್ಶಯಾಮಿ ।
ಅಮೃತೀಕರಣಾರ್ಥಂ ಧೇನು ಮುದ್ರಾಂ ಪ್ರದರ್ಶಯಾಮಿ ।
ಪವಿತ್ರೀಕರಣಾರ್ಥಂ ಶಂಖ ಮುದ್ರಾಂ ಪ್ರದರ್ಶಯಾಮಿ ।
ದಿಗ್ಬಂಧನಾರ್ಥಂ ಗದಾ ಮುದ್ರಾಂ ಪ್ರದರ್ಶಯಾಮಿ ।
ಸಂರಕ್ಷಣಾರ್ಥಂ ಚಕ್ರ ಮುದ್ರಾಂ ಪ್ರದರ್ಶಯಾಮಿ ।

ಐದು ಮುದ್ರೆಗಳನ್ನು ತೋರಿಸಬೇಕು.

ಮತ್ತೆ ಕೈಯಲ್ಲಿ ನೀರು ತೆಗೆದುಕೊಂಡು 'ಓಂ ನಮೋ ನಾರಾಯಣಾಯ' ಮಂತ್ರದಿಂದ ಅಭಿಮಂತ್ರಿಸಿ ಓಂ ಭೂರ್ಭುವಃಸ್ವಃ ಸತ್ಯಂ ತ್ವರ್ತೇನ ಪರಿಷಿಂಚಾಮಿ ಹೇಳಿ ನೈವೇದ್ಯಕ್ಕೆ ಪರಿಷೇಚನ ಮಾಡಿ ಓಂ ಅಮೃತೋಪಸ್ತರಣಮಸಿ ಸ್ವಾಹಾ ಎಂದು ಹೇಳುತ್ತ ಲಕ್ಷ್ಮೀಹಸ್ತದಿಂದಆಪೋಶನವನ್ನು ಕೊಟ್ಟು ಆ ಜಲವನ್ನು ಅರ್ಘ್ಯ ಪಾತ್ರೆಯಲ್ಲಿ ಹಾಕಬೇಕು.

ಓಂ ಪ್ರಾಣಾತ್ಮನೇ ಅನಿರುದ್ಧಾಯ ಸ್ವಾಹಾ । ಇದಂ ನಮಮ
ಓಂ ಅಪಾನಾತ್ಮನೇ ಪ್ರದ್ಯುಮ್ನಾಯ ಸ್ವಾಹಾ । ಇದಂ ನಮಮ
ಓಂ ವ್ಯಾನಾತ್ಮನೇ ಸಂಕರ್ಷಣಾಯ ಸ್ವಾಹಾ । ಇದಂ ನಮಮ
ಓಂ ಉದಾನಾತ್ಮನೇ ವಾಸುದೇವಾಯ ಸ್ವಾಹಾ । ಇದಂ ನಮಮ
ಓಂ ಸಮಾನಾತ್ಮನೇ ನಾರಾಯಣಾಯ ಸ್ವಾಹಾ । ಇದಂ ನಮಮ

ಎಂದು ಹೇಳಬೇಕು.

ಶ್ರೀನಿವಾಸ ನಮಸ್ತುಭ್ಯಂ ಮಹಾನ್ನೈವೇದ್ಯಮುತ್ತಮಮ್ ।
ಸಂಗ್ರಹಾಣ ಸುರಶ್ರೇಷ್ಠ ಭುಕ್ತಿಮುಕ್ತಿಪ್ರದಾಯಕ ॥
ಓಂ ನಮೋ ನಾರಾಯಣಾಯ ನೈವೇದ್ಯಂ ಸಮರ್ಪಯಾಮಿ ।

ಹತ್ತು ಸಾರೆ ಮೂಲಮಂತ್ರ ಜಪಿಸಬೇಕು.

ಓಂ ನಮೋ ನಾರಾಯಣಾಯ ಮಧ್ಯೇ ಮಧ್ಯೇ ಪಾನೀಯಂ ಸಮರ್ಪಯಾಮಿ
ಅಮೃತಾಪಿಧಾನಮಸಿಸ್ವಾಹಾ । ಉತ್ತರಾಪೋಶನಂ ಸಮರ್ಪಯಾಮಿ
ಹಸ್ತಪ್ರಕ್ಷಾಲನಂ ಸಮರ್ಪಯಾಮಿ । ಮುಖಪ್ರಕ್ಷಾಲನಂ ಸಮರ್ಪಯಾಮಿ
ಕರೋದ್ವರ್ತನಾರ್ಥೇ ಚಂದನಂ ಸಮರ್ಪಯಾಮಿ । ಆಚಮನೀಯಂ ಸಮರ್ಪಯಾಮಿ
ಪೂಗೀಫಲ ತಾಂಬೂಲಂ ಸಮರ್ಪಯಾಮಿ । ಸುವರ್ಣ ಪುಷ್ಪದಕ್ಷಿಣಾಂ
ಸಮರ್ಪಯಾಮಿ । ಮಹಾನಿರಾಜನ ದೀಪಂ ಸಮರ್ಪಯಾಮಿ ॥
ಜಯತಿ ಹರಿರಚಿಂತ್ಯಃ ಸರ್ವದೇವೈಕವಂದ್ಯಃ
ಪರಮಗುರುರಭೀಷ್ಟಾವಾಪ್ತಿದಃ ಸಜ್ಜನಾನಾಂ ।
ನಿಖಿಲಗುಣಗಣಾರ್ಣೋ ನಿತ್ಯ ನಿರ್ಮುಕ್ತ ದೋಷಃ
ಸರಸಿಜನಯನೋಽಸೌ ಶ್ರೀಪತಿರ್ಮಾನದೋನಃ ॥

(ಇಲ್ಲಿ ಶ್ರಿಯಃ ಪತ್ಯೇ ....... ಅಥವಾ ಶುದ್ಧಾನಂದೋರುಸಂವಿದ್ ಇತ್ಯಾದಿಗಳನ್ನು ಕೂಡ ಹೇಳಬಹುದು) ನೀರಾಜನವನ್ನು ಮಾಡಿದ ನಂತರದಲ್ಲಿ ದೇವರಿಗೆ ಛತ್ರ, ಚಾಮರ, ದರ್ಪಣ ಇತ್ಯಾದಿ ಮಹಾರಾಜೋಪಚಾರಗಳನ್ನು ಸಮರ್ಪಿಸಬೇಕು. *

ಶಂಖದಲ್ಲಿ ನೀರು ತುಂಬಿಸಿ ಬಿಂಬಛಾಯೆಯ ದೋಷ ಪರಿಹಾರಕ್ಕಾಗಿ ಶಂಖ ಭ್ರಮಣವನ್ನು ಮಾಡಬೇಕು. 'ಓಂ ನಮೋ ನಾರಾಯಣಾಯ" ಮಂತ್ರ ಜಪಿಸಿ ಈ ಮಂತ್ರ ಹೇಳಬೇಕು.

ಇಮಾ ಆಪಃ ಶಿವತಮಾಃ ಇಮಾ ಸರ್ವಸ್ಯ ಭೇಷಜೀಃ ।
ಇಮಾ ರಾಷ್ಟ್ರಸ್ಯ ವರ್ಧಿನೀಃ ಇಮಾ ರಾಷ್ಟ್ರಭೃತೋಽಮೃತಾಃ ॥
(ಈ ಶಂಖತೀರ್ಥವನ್ನು ಬೇರೆ ತೆಗೆದಿಟ್ಟುಕೊಳ್ಳಬೇಕು)

೧೬. ನಮಸ್ಕಾರ :

ವೇದಿಕೆಯಿಂದ ಕೆಳಗೆ ಇಳಿದು ಪೂಜಕನು ಪ್ರದಕ್ಷಿಣ ನಮಸ್ಕಾರಗಳನ್ನು ದೇವರಿಗೆ ಅರ್ಪಿಸಬೇಕು.

---

* ಬೊಗಸೆಯಲ್ಲಿ ಹೂ, ತುಲಸಿಗಳನ್ನು ತೆಗೆದುಕೊಂಡು 'ಓಂ ನಮೋ ಮಹದ್ಭ್ಯೋ ನಮೋ' ಮಂತ್ರ ಹೇಳಿ ಓಂ ರಾಜಾಧಿರಾಜಾಯ ... ಮಹಾರಾಜಾಯ ನಮಃ । ಓಂ ಸ್ವಸ್ತಿ .... ವಿಶ್ವೇದೇವಾಸಭಾಸದ ಇತಿ ಎಂದು ಹೇಳಿ ಓಂ ನಮೋ ನಾರಾಯಣಾಯ ಮಂತ್ರ ಪುಷ್ಪಂ ಸಮರ್ಪಯಾಮಿ ॥ ಮಂತ್ರ ಪುಷ್ಪಗಳನ್ನು ದೇವರಿಗೆ ಅರ್ಪಿಸಬೇಕು.
(ಛತ್ರಂ ಚಾಮರಂ ಗೀತಂ ನೃತ್ಯಂ ವಾದ್ಯಂ ಸರ್ವೋಪಚಾರಾರ್ಥೇ ತುಳಸೀ ಪತ್ರಂ ಸಮರ್ಪಯಾಮಿ ಹೇಳಿ ತುಳಸಿಯನ್ನು ಅರ್ಪಿಸಬೇಕು.)

ಯಾನಿ ಕಾನಿ ಚ ಪಾಪಾನಿ ಜನ್ಮಾಂತರ ಕೃತಾನಿ ಚ ।
ತಾನಿ ತಾನಿ ವಿನಶ್ಯಂತಿ ಪ್ರದಕ್ಷಿಣ ಪದೇ ಪದೇ ॥
ಓಂ ನಮೋ ನಾರಾಯಣಾಯ ಪ್ರದಕ್ಷಿಣ ನಮಸ್ಕಾರಾನ್ ಸಮರ್ಪಯಾಮಿ ।

(ಪೂಜಾಷಾಡ್ಗುಣ್ಯ ಸಿದ್ಧಿಗಾಗಿ ಯಥಾಶಕ್ತಿ ಮೂಲ ಮಂತ್ರವನ್ನು ಜಪಿಸಬೇಕು.)

**ರಮಾ ನೈವೇದ್ಯ :** ರಮಾ ಬ್ರಹ್ಮಾದಿಗಳಿಗೆ ತೀರ್ಥ, ನಿರ್ಮಾಲ್ಯ ಗಂಧ, ತುಲಸಿಗಳನ್ನು ಅರ್ಪಿಸಿ ರಮಾನೈವೇದ್ಯ ಮಾಡಬೇಕು.

ರಮಾ ಬ್ರಹ್ಮಾದಯೋ ದೇವಾಃ ಸನಕಾದ್ಯಾ ಶುಕಾದಯಃ ।
ಶ್ರೀ ನರಸಿಂಹ ಪ್ರಸಾದೋಽಯಂ ಸರ್ವೇ ಗೃಹ್ಣಂತು ವೈಷ್ಣವಾಃ ॥

ದೇವರಿಗೆ ಮಾಡಿದ ನೀರಾಜನವನ್ನು ಇವರಿಗೂ ಮಾಡಬೇಕು. ಆಮೇಲೆ ಸಾಲಿಗ್ರಾಮವನ್ನು ಸ್ಪರ್ಶ ಮಾಡಬೇಕು. ನಂತರ ಸಾಲಿಗ್ರಾಮ ಪ್ರತಿಮೆಗಳನ್ನು ಸಂಪುಷ್ಟದಲ್ಲಿಟ್ಟು ಭುಜಂಗಿಸಬೇಕು.

**ಪೂಜಾ ಸಮರ್ಪಣೆ :**

ನಾಹಂ ಕರ್ತಾ ಹರಿಃ ಕರ್ತಾ ತ್ವತ್ಪೂಜಾ ಕರ್ಮಚಾಖಿಲಂ ।
ತಥಾಪಿ ಮತ್ಕೃತಾ ಪೂಜಾ ತ್ವತ್ಪ್ರಸಾದೇನ ನಾನ್ಯಥಾ ॥
ಮಂತ್ರ ಹೇಳಿ ಪೂಜೆಯನ್ನು ಶ್ರೀಹರಿಗೆ ಸಮರ್ಪಿಸಬೇಕು.

**ಪೂಜಾಸಮಾಪನೆ :**

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋವಂದೇ ತಮಚ್ಯುತಂ ॥
ಮಂತ್ರಹೀನಂ ಕ್ರಿಯಾ ಹೀನಂ ಭಕ್ತಿಹೀನಂ ರಮಾಪತೇ ।
ಯತ್ಕೃತಂತು ಮಯಾದೇವ ಪರಿಪೂರ್ಣಂ ತದಸ್ತುಮೇ ॥
ಅನೇನ ಷೋಡಶೋಪಚಾರ ಪೂಜನೇನ ಭಗವಾನ್ ಶ್ರೀ ಭಾರತೀರಮಣ
ಮುಖ್ಯಪ್ರಾಣಾಂ ತರ್ಗತ ಶ್ರೀ ಲಕ್ಷ್ಮೀನಾರಾಯಣಃ ಪ್ರೀಯತಾಂ ಪ್ರೀತೋಭವತು॥

॥ ಶ್ರೀ ಮಧ್ವಾಂತರ್ಗತ ಶ್ರೀ ಕೃಷ್ಣಾರ್ಪಣಮಸ್ತು ॥

# ಶ್ರೀ ವೈಶ್ವದೇವ ಕ್ರಮ
## (ಆಶ್ವಲಾಯನ)

ಆಚಮ್ಯ, ಪ್ರಾಣಾನಾಯಮ್ಯ.......... ದೇಶಕಾಲೌ ಸಂಕೀರ್ತ್ಯ ಪೂರ್ವೋಕ್ತ ಏವಂ ಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ ಶ್ರೀ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ವಿಷ್ಣುಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಂ ಅಗ್ನ್ಯಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಪರಶುರಾಮಪ್ರೇರಣಯಾ ಶ್ರೀಪರಶುರಾಮಪ್ರೀತ್ಯರ್ಥಂ ಪಂಚಸೂನಾ ದೋಷ ಪರಿಹಾರಾರ್ಥಂ ಪ್ರಾತಃಸಾಯಂ ವೈಶ್ವದೇವಾಖ್ಯಂ ಕರ್ಮಕರಿಷ್ಯೇ॥

**ಅಗ್ನಿ ಆವಾಹನವ್ :**

ಜುಷ್ಟೋದಮೂನಾ ಆತ್ರೇಯೋ ವಸುಶ್ರುತೋಽಗ್ನಿಸ್ತ್ರಿಷ್ಟುಪ್ । ಏಹ್ಯಗ್ನೇ ರಾಹುಗಣೋ ಗೌತಮೋಽಗ್ನಿಸ್ತ್ರಿಷ್ಟುಪ್ । ಅಗ್ನ್ಯಾವಾಹನೇ ವಿನಿಯೋಗಃ ॥

ಓಂ ಜುಷ್ಟೋದಮೂನಾ ಅತಿಥಿರ್ದುರೋಣ ಇಮಂನೋ
ಯಜ್ಞಮುಪಯಾಹಿ ವಿದ್ವಾನ್ । ವಿಶ್ವಾಅಗ್ನೇ ಅಭಿಯುಜೋ
ವಿಹತ್ಯಾ ಶತ್ರೂಯತಾಮಾಭರಾ ಭೋಜನಾನಿ ॥ ಏಹ್ಯಗ್ನ ಇಹಹೋತಾ
ನಿಷೀದಾದಬ್ಧಃ ಸುಪುರ ಏತಾ ಭವಾನಃ । ಅವತಾಂ ತ್ವಾ ರೋದಸೀ
ವಿಶ್ವಮಿನ್ವೇ ಯಜಾಮಹೇ ಸೌಮನಸಾಯ ದೇವಾನ್ ॥

(ಅಕ್ಷತೆಗಳಿಂದ ಆವಾಹಿಸಿ ಆಚ್ಛಾದನವನ್ನು ದೂರಮಾಡಬೇಕು)

**ಅಗ್ನಿ ಪ್ರತಿಷ್ಠಾಪನವ್ :**

ಸಮಸ್ತವ್ಯಾಹೃತೀನಾಂ ಪರಮೇಷ್ಠೀ ಪ್ರಜಾಪತಿಃ ಪ್ರಜಾಪತಿರ್ಬೃಹತೀ ಅಗ್ನಿಪ್ರತಿಷ್ಠಾಪನೇ ವಿನಿಯೋಗಃ ॥

ಓಂ ಭೂರ್ಭುವಃ ಸ್ವರೋಮ್ । ವಿಷ್ಣುವೀರ್ಯಾತ್ಮಕಂ ರುಕ್ಮಕನಾಮಾನಂ ಅಗ್ನಿಂ ಪ್ರತಿಷ್ಠಾಪಯಾಮಿ ।

(ತುಳಸೀಕಾಷ್ಠವನ್ನು ಅಗ್ನಿಯಲ್ಲಿ ಹಾಕಿ ಊದುಗೊಳವೆಯಿಂದ ಅಗ್ನಿಯನ್ನು ಪ್ರಜ್ವಲಿಸಬೇಕು). ಇಲ್ಲಿ ಕೆಲವರು ಅನಿರುದ್ಧಾದಿ ರೂಪಗಳಿಗೆ ೪ ಆಜ್ಯಾಹುತಿಗಳನ್ನು ಕೊಡುವದುಂಟು.*

**ಅಗ್ನಿಮೂರ್ತಿ ಧ್ಯಾನವ್ :**

ಚತ್ವಾರಿಶೃಂಗೇತಿ ಗೌತಮೋ ವಾಮದೇವೋಽಗ್ನಿಸ್ತ್ರಿಷ್ಟುಪ್, ಅಗ್ನಿಮೂರ್ತಿಧ್ಯಾನೇ ವಿನಿಯೋಗಃ ॥

ಓಂ ಚತ್ವಾರಿಶೃಂಗಾ ತ್ರಯೋ ಅಸ್ಯ ಪಾದಾ ದ್ವೇಶೀರ್ಷೇ ಸಪ್ತಹಸ್ತಾಸೋ ಅಸ್ಯ। ತ್ರಿಧಾಬದ್ಧೋ ವೃಷಭೋರೋರವೀತಿ ಮಹೋದೇವೋ ಮರ್ತ್ಯಾಂ ಆವಿವೇಶ॥

ಸಪ್ತಹಸ್ತಶ್ಚತು ಶೃಂಗಃ ಸಪ್ತಜಿಹ್ವೋ ದ್ವಿಶೀರ್ಷಕಃ। ತ್ರಿಪಾತ್ ಪ್ರಸನ್ನವದನಃ ಸುಖಾಸೀನಃ ಶುಚಿಸ್ಮಿತಃ। ಸ್ವಾಹಾಂತು ದಕ್ಷಿಣೇ ಪಾರ್ಶ್ವೇ ದೇವೀಂ ವಾಮೇ ಸ್ವಧಾಂ ತಥಾ। ಬಿಭ್ರುದ್ದಕ್ಷಿಣಹಸ್ತೈಸ್ತು ಶಕ್ತಿಮನ್ನಂ ಸ್ರುಚಂ ಸ್ರುವಂ। ತೋಮರಂ ವ್ಯಜನಂ ವಾಮೈರ್ಘೃತ ಪಾತ್ರಂ ಚ ಧಾರಯನ್। ಮೇಷಾರೂಢೋ ಜಟಾಬದ್ಧೋ ಗೌರವರ್ಣೋ ಮಹೌಜಸಃ। ಧೂಮ್ರಧ್ವಜೋ ಲೋಹಿತಾಕ್ಷಃ ಸಪ್ತಾರ್ಚಿಃ ಸರ್ವಕಾಮದಃ। ಆತ್ಮಾಭಿಮುಖಮಾಸೀನ ಏವಂ ರೂಪೋಹುತಾಶನಃ।

**ಅಗ್ನ್ಯಂತರ್ಗತ ಮುಖ್ಯಪ್ರಾಣಾಂತರ್ಗತ ಪರಶುರಾಮ ಧ್ಯಾನವ್ :**

ಆದೌ ಮುಖ್ಯಪ್ರಾಣಧ್ಯಾನವ್

ಉದ್ಯದ್ರವಿಪ್ರಕರ ಸನ್ನಿಭಮಚ್ಯುತಾಂಕೇ
ಸ್ವಾಸೀನಮಸ್ಯ ನುತಿನಿತ್ಯವಚಃ ಪ್ರವೃತ್ತಿಂ।
ಧ್ಯಾಯೇದ್ಗದಾಭಯಕರಂ ಸುಕೃತಾಂಜಲಿಂತಂ
ಪ್ರಾಣಂ ಯಥೇಷ್ಟತನುಮುನ್ನತ ಕರ್ಮಶಕ್ತಿವ್॥

---

* ಅಗ್ನೇಃ ಷೋಡಶ ಸಂಸ್ಕಾರಸಿದ್ಧ್ಯರ್ಥಂ ವ್ಯಸ್ತಸಮಸ್ತ ವ್ಯಾಹೃತ್ಯಾ ಚತುರ್ವಾರಂ ಪುನಶ್ಚ ಪೂರ್ಣಾಹುತ್ಯರ್ಥಂ ಏಕವಾರಂ ಏವಂ ಪಂಚಾಜ್ಯಾಹುತಿರ್ಹೋಷ್ಯೇ। ಹೀಗೆ ಸಂಕಲ್ಪಿಸಿ ಓಂ ಭೂಃಸ್ವಾಹಾ ಅಗ್ನಯೇ ಶ್ರೀ ಅನಿರುದ್ಧಾಯ ಇದಂನ ಮಮ । ಓಂ ಭುವಃಸ್ವಾಹಾ ವಾಯುವೇ ಶ್ರೀ ಪ್ರದ್ಯುಮ್ನಾಯ ಇದಂ ನ ಮಮ । ಓಂ ಸ್ವಃಸ್ವಾಹಾ ಸೂರ್ಯಾಯ ಶ್ರೀ ಸಂಕರ್ಷಣಾಯ ಇದಂ ನ ಮಮ । ಓಂ ಭೂರ್ಭುವಃಸ್ವಃ ಸ್ವಾಹಾ ಪ್ರಜಾಪತಯೇ ಶ್ರೀ ವಾಸುದೇವಾಯ ಇದಂ ನ ಮಮ ॥

**ಪರಶುರಾಮಧ್ಯಾನವ್ :**

ಅಂಗಾರವರ್ಣಮಭಿತೋಂಡ ಬಹಿಃ ಪ್ರಭಾಭಿ
ರ್ವ್ಯಾಪ್ತಂ ಪರಶ್ವಥ ಧನುರ್ಧರಮೇಕವೀರಂ।
ಧ್ಯಾಯೇದಜೇಶ ಪುರುಹೂತಮುಖೈಸ್ತುವದ್ಭಿ
ರಾವೀತಮಾತ್ಮಪದವೀಂ ಪ್ರತಿಪಾದಯಂತಂ॥

**ಅಗ್ನಿಸಮ್ಮುಖೀಕರಣವ್ :**

ಏಷ ಹಿ ದೇವ ಇತ್ಯಸ್ಯ ಹಿರಣ್ಯಗರ್ಭೋಽಗ್ನಿಸ್ತ್ರಿಷ್ಟುಪ್ ಅಗ್ನಿಸಮ್ಮುಖೀಕರಣೇವಿನಿಯೋಗಃ॥

ಏಷ ಹಿ ದೇವಃ ಪ್ರದಿಶೋನು ಸರ್ವಾಃ ಪೂರ್ವೋ ಹಿ ಜಾತಸ್ಸ ಉ-

ಗರ್ಭೇ ಅಂತಃ। ಸವಿಜಾಯಮಾನಃ ಸಜನಿಷ್ಯಮಾಣಃ ಪ್ರತ್ಯಙ್ಮುಖಾಸ್ತಿಷ್ಠತಿ

ವಿಶ್ವತೋ ಮುಖಃ॥

ಅಗ್ನೇ ವೈಶ್ವಾನರ ಶಾಂಡಿಲ್ಯಗೋತ್ರ ಮೇಷಾರೂಢ ಮೇಷಧ್ವಜ ವರಪ್ರದ ಪ್ರಾಙ್ಮುಖೋದೇವ ಮಮಸಮ್ಮುಖೋ ವರದೋಭವ॥
(ಅಗ್ನಿಯು ತಮ್ಮ ಅಭಿಮುಖನಾಗಿ ಇರುವಂತೆ ಭಾವಿಸಬೇಕು)

**ಪರಿಷೇಕವ್ :**

ಅದಿತೇಽನುಮನ್ಯಸ್ವ,
ಅನುಮತೇಽನುಮನ್ಯಸ್ವ,
ಸರಸ್ವತೇಽನುಮನ್ಯಸ್ವ,
ದೇವಸವಿತುಃ ಪ್ರಸುವ,

ಈಶಾನ್ಯದಿಂದ ಪ್ರಾರಂಭಿಸಿ ಅಗ್ನಿಯ ಸುತ್ತಲೂ ನೀರಿನಿಂದ ಪರಿಷೇಚನ ಮಾಡಬೇಕು.

ಅಗ್ನಿ ಅಲಂಕರಣವ್ (ಪೂಜನವ್) :

ವಿಶ್ವಾನಿನ ಇತಿ ತಿಸೃಣಾಮಾತ್ರೇಯೋ ವಸುಸ್ರುತೋಽಗ್ನಿಸ್ತ್ರಿಷ್ಟುಪ್। ಅಗ್ನ್ಯರ್ಚನೇವಿನಿಯೋಗಃ॥

ಓಂ ವಿಶ್ವಾನಿನೋ ದುರ್ಗಹಾ ಜಾತವೇದಃ। ಸಿಂಧುಂ ನ ನಾವಾದುರಿತಾ-
ತಿಪರ್ಷಿ। ಅಗ್ನೇ ಅತ್ರಿವನ್ನಮಸಾ ಗೃಣಾನಃ। ಅಸ್ಮಾಕಂ ಬೋಧ್ಯವಿತಾ
ತನೂನಾಂ। ಯಸ್ತ್ವಾಹೃದಾ ಕೀರಿಣಾ ಮನ್ಯಮಾನಃ। ಅಮರ್ತ್ಯಂ ಮರ್ತ್ಯೋ
ಜೋಹವೀಮಿ। ಜಾತವೇದೋ ಯಶೋ ಅಸ್ಮಾಸು ದೇಹಿ। ಪ್ರಜಾಭಿರಗ್ನೇ

ಅಮೃತತ್ವಮಶ್ಯಾಂ। ಯಸ್ಮೈತ್ವಂ ಸುಕೃತೇ ಜಾತವೇದ ಉಲೋಕಮಗ್ನೇ
ಕೃಣವಃ ಸ್ಯೋನಂ। ಅಶ್ವಿನಂ ಸುಪುತ್ರಿಣಾ ವೀರವಂತಂ ಗೋಮಂತಂ
ರಯಿಂ ನ ಶತೆ ಸ್ವಸ್ತಿ॥ ಈ ಮಂತ್ರದಿಂದ ಪ್ರಾರ್ಥಿಸಬೇಕು.

"ಆಹುತೇರನುಜ್ಞಾ" ಎಂದು ಬ್ರಾಹ್ಮಣರನ್ನು ಕೇಳಿ "ಸುಹುತಮಸ್ತು" ಎಂದು ಅವರು ಹೇಳಿದ ನಂತರ ಎಡಗೈಯನ್ನು ಎದೆಗಿಟ್ಟುಕೊಂಡು ಮೃಗೀ ಮುದ್ರೆಯಿಂದ (ಅಂಗುಷ್ಠ, ಮಧ್ಯಮ, ಮತ್ತು ಅನಾಮಿಕ ಬೆರಳುಗಳಿಂದ) ತುಪ್ಪಬಡಿಸಿದ ನೈವೇದ್ಯಶೇಷ ಅನ್ನವನ್ನು ತೆಗೆದುಕೊಂಡು ಆಹುತಿಗಳನ್ನು ಕೊಡಬೇಕು.

**ಆಹುತಿಪ್ರದಾನವ್***:

ಓಂ ನಮೋ ನಾರಾಯಣಾಯಸ್ವಾಹಾ, ನಾರಾಯಣಾಯ ಇದಂ ನ ಮಮ।
(ಈ ನಾರಾಯಣ ಅಷ್ಟಾಕ್ಷರ ಮಂತ್ರದಿಂದ ೮ ಆಹುತಿಗಳನ್ನು ಹಾಕಬೇಕು.)

ಓಂ ಕ್ಲೀಂ ಕೃಷ್ಣಾಯಸ್ವಾಹಾ, ಕೃಷ್ಣಾಯ ಇದಂ ನ ಮಮ।
(ಈ ಕೃಷ್ಣ ಷಡಕ್ಷರ ಮಂತ್ರದಿಂದ ೬ ಆಹುತಿಗಳನ್ನು ಹಾಕಬೇಕು.)

ಓಂ ಸೂರ್ಯಾಯ ಸ್ವಾಹಾ, ಸೂರ್ಯಾಯ ಇದಂ ನ ಮಮ।
ಓಂ ಪ್ರಜಾಪತಯೇ ಸ್ವಾಹಾ, ಪ್ರಜಾಪತಯ ಇದಂ ನ ಮಮ।
ಓಂ ಅಗ್ನಯೇ ಸ್ವಾಹಾ, ಅಗ್ನಯ ಇದಂ ನ ಮಮ।
ಓಂ ಪ್ರಜಾಪತಯೇ ಸ್ವಾಹಾ, ಪ್ರಜಾಪತಯ ಇದಂ ನ ಮಮ।
ಓಂ ಸೋಮಾಯ ವನಸ್ಪತಯೇ ಸ್ವಾಹಾ, ಸೋಮಾಯ ವನಸ್ಪತಯ ಇದಂ ನ ಮಮ।
ಓಂ ಅಗ್ನಿಷೋಮಾಭ್ಯಾಂ ಸ್ವಾಹಾ, ಅಗ್ನಿಷೋಮಾಭ್ಯಾಂ ಇದಂ ನ ಮಮ।
ಓಂ ಇಂದ್ರಾಗ್ನಿಭ್ಯಾಂ ಸ್ವಾಹಾ, ಇಂದ್ರಾಗ್ನಿಭ್ಯಾಂ ಇದಂ ನ ಮಮ।
ಓಂ ದ್ಯಾವಾಪೃಥಿವೀಭ್ಯಾಂ ಸ್ವಾಹಾ, ದ್ಯಾವಾಪೃಥಿವೀಭ್ಯಾಂ ಇದಂ ನ ಮಮ।
ಓಂ ಧನ್ವಂತರಯೇ ಸ್ವಾಹಾ, ಧನ್ವಂತರಯ ಇದಂ ನ ಮಮ।
ಓಂ ಇಂದ್ರಾಯ ಸ್ವಾಹಾ, ಇಂದ್ರಾಯ ಇದಂ ನ ಮಮ।
ಓಂ ವಿಶ್ವೇಭ್ಯೋದೇವೇಭ್ಯಃ ಸ್ವಾಹಾ, ವಿಶ್ವೇಭ್ಯೋ ದೇವೇಭ್ಯ ಇದಂ ನ ಮಮ।
ಓಂ ಬ್ರಹ್ಮಣೇ ಸ್ವಾಹಾ ಬ್ರಹ್ಮಣ ಇದಂ ನ ಮಮ।

ವೈಶ್ವದೇವ ಸಾಂಗತಾಸಿದ್ಧ್ಯರ್ಥಂ (ಷಾಡ್ಗುಣ್ಯಾರ್ಥಂ) ವ್ಯಾಹೃತಿಹೋಮಂ ಕರಿಷ್ಯೇ।

---

* ಇಲ್ಲಿ ಮೊದಲು ಪುರುಷಸೂಕ್ತದ ೧೬ ಮಂತ್ರಗಳಿಂದ ೧೬ ಆಹುತಿಗಳನ್ನು ಕೊಡುವುದೂ ಉಂಟು. ಅವರವರ ಸಂಪ್ರದಾಯದಂತೆ ಮಾಡಬಹುದು.

ಓಂ ಭೂಃ ಸ್ವಾಹಾ ಅಗ್ನಯೇ ಶ್ರೀ ಅನಿರುದ್ಧಾಯ ಇದಂ ನ ಮಮ।
ಓಂ ಭುವಃ ಸ್ವಾಹಾ ವಾಯವೇ ಶ್ರೀ ಪ್ರದ್ಯುಮ್ನಾಯ ಇದಂ ನ ಮಮ।
ಓಂ ಸ್ವಃ ಸ್ವಾಹಾ ಸೂರ್ಯಾಯ ಶ್ರೀ ಸಂಕರ್ಷಣಾಯ ಇದಂ ನ ಮಮ।
ಓಂ ಭೂರ್ಭುವಃ ಸ್ವಃ ಸ್ವಾಹಾ ಪ್ರಜಾಪತಯೇ ಶ್ರೀ ವಾಸುದೇವಾಯ ಇದಂ ನ ಮಮ।

ಈಗ ಪರಿಷೇಕವನ್ನು ಮಾಡಿ, ಅಗ್ನ್ಯಂತರ್ಗತ ಹರಿಣೀಪತಿ ಶ್ರೀ ಪರಶುರಾಮಾಯನಮಃ ಸಕಲ ಪೂಜಾರ್ಥೇ ತೀರ್ಥ ಗಂಧಾಕ್ಷತ ತುಳಸೀಪತ್ರಂ ಸಮರ್ಪಯಾಮಿ॥ ಎಂದು ಸಮರ್ಪಿಸಬೇಕು.

**ಅಗ್ನಿ ಉಪಸ್ಥಾನವ್ :**

ಓಂ ಚಮಇತ್ಯಸ್ಯ ಸಾರಸ್ವತೋಽಗ್ನಿಸ್ತ್ರಿಷ್ಟುಪ್। ಅಗ್ನಿಪ್ರಾರ್ಥನೇ ವಿನಿಯೋಗಃ।

ಓಂ ಚಮೇ ಸ್ವರಶ್ಚ ಮೇ ಯಜ್ಞೋಪಚತೇ ನಮಶ್ಚ। ಯತ್ತೇ ನ್ಯೂನಂ ತಸ್ಮೈತ ಉಪಯತ್ತೇಽತಿರಿಕ್ತಂ ತಸ್ಮೈತೇ ನಮಃ।

ಅಗ್ನಯೇ ನಮಃ ॥ಓಂ ಸ್ವಸ್ತಿ॥
ಶ್ರದ್ಧಾಂ ಮೇಧಾಂ ಯಶಃ ಪ್ರಜ್ಞಾಂ ವಿದ್ಯಾಂ ಬುದ್ಧಿಂ ಶ್ರಿಯಂ ಬಲಂ।
ಆಯುಷ್ಯಂ ತೇಜ ಆರೋಗ್ಯಂ ದೇಹಿ ಮೇ ಹವ್ಯವಾಹನ।
ದೇಹಿ ಮೇ ಹವ್ಯವಾಹನ ಓಂ ನಮೋ ನಮಃ॥ (ನಮಸ್ಕರಿಸಬೇಕು)
ಅಗ್ನಿಸ್ತು ವಿಶ್ರವಸ್ತಮಂ ತು ಬ್ರಹ್ಮಾಣಮುತ್ತಮಂ।
ಅತೂರ್ತಂ ಶ್ರಾವಯತ್ಪತಿಂ ಪುತ್ರಂ ದದಾತು ದಾಶುಷೇ॥

**ಸಮಾಪನವ್ :**

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪೋಯಜ್ಞಕ್ರಿಯಾದಿಷು।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋವಂದೇ ತಮಚ್ಯುತಂ॥
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಹುತಾಶನ।
ಯತ್ಕೃತಂತು ಮಯಾದೇವ ಪರಿಪೂರ್ಣಂ ತದಸ್ತುಮೇ॥
ಅನೇನ ಪ್ರಾತಃಸಾಯಂ ವೈಶ್ವದೇವ ಹೋಮೇನ ಭಗವಾನ್ ಯಜ್ಞ
ಪುರುಷಾಂತರ್ಯಾಮಿ ಹರಿಣೀಪತಿ ಶ್ರೀಪರಶುರಾಮಃ ಪ್ರೀಯತಾಂ
ಪ್ರೀತೋಭವತು॥ ಶ್ರೀಮಧ್ವಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು॥

ವಿಷ್ಣವೇನಮೋ ವಿಷ್ಣವೇನಮೋ ವಿಷ್ಣವೇ ನಮಃ

– ಶ್ರೀಮಧ್ವೇಶಾರ್ಪಣಮಸ್ತು –

– ⊙ –

# ಬಲಿಹರಣ ಕ್ರಮ

ಆಚಮ್ಯ, ಪ್ರಾಣಾನಾಯಮ್ಯ............ಪೂರ್ವೋಕ್ತ ಏವಂಗುಣವಿಶೇಷಣ ವಿಶಿಷ್ಟಾಯಾಂ ಶುಭತಿಥೌ ಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಂ ಬಲಿಹರಣಂ ಕರಿಷ್ಯೇ॥

ಒಲೆಯ ದಕ್ಷಿಣಭಾಗದ ಭೂಮಿಯನ್ನು ತೊಳೆದು ವರ್ತುಲಾಕಾರದ ಮಂಡಲವನ್ನು ಮಾಡಿ ಪೂರ್ವದಿಂದ ಪ್ರಾರಂಭಿಸಿ ಚಕ್ರಾಕಾರವಾಗಿ ಬಲಿಹರಣವನ್ನು ಮಾಡಬೇಕು.

೧) ಸೂರ್ಯಾಯ ಸ್ವಾಹಾ।
೨) ಪ್ರಜಾಪತಯೇ ಸ್ವಾಹಾ।
೩) ಅಗ್ನಯೇ ಸ್ವಾಹಾ।
೪) ಪ್ರಜಾಪತಯೇ ಸ್ವಾಹಾ।
೫) ಸೋಮಾಯವನಸ್ಪತಯೇ ಸ್ವಾಹಾ।
೬) ಅಗ್ನಿಷೋಮಾಭ್ಯಾಂ ಸ್ವಾಹಾ।
೭) ಇಂದ್ರಾಗ್ನಿಭ್ಯಾಂ ಸ್ವಾಹಾ।
೮) ಧನ್ವಂತರಯೇ ಸ್ವಾಹಾ।
೯) ದ್ಯಾವಾಪೃಥಿವೀಭ್ಯಾಂ ಸ್ವಾಹಾ।
೧೦) ಇಂದ್ರಾಯ ಸ್ವಾಹಾ।
೧೧) ವಿಶ್ವೇಭ್ಯೋದೇವೇಭ್ಯಃ ಸ್ವಾಹಾ।
೧೨) ಬ್ರಹ್ಮಣೇ ಸ್ವಾಹಾ।
೧೩) ಅದ್ಭ್ಯಃ ಸ್ವಾಹಾ।
೧೪) ಓಷಧಿವನಸ್ಪತಿಭ್ಯಃ ಸ್ವಾಹಾ।
೧೫) ಗೃಹಾಯ ಸ್ವಾಹಾ।
೧೬) ಗೃಹದೇವತಾಭ್ಯಃ ಸ್ವಾಹಾ। ಚಕ್ರದ ಹೊರಗೆ ಪೂರ್ವಕ್ಕೆ-
೧೭) ವಾಸ್ತುದೇವತಾಭ್ಯಃ ಸ್ವಾಹಾ।
೧೮) ಇಂದ್ರಾಯ ಸ್ವಾಹಾ। ದಕ್ಷಿಣಕ್ಕೆ-
೧೯) ಇಂದ್ರಪುರುಷೇಭ್ಯಃ ಸ್ವಾಹಾ।
೨೦) ಯಮಾಯ ಸ್ವಾಹಾ। ಪಶ್ಚಿಮಕ್ಕೆ-
೨೧) ಯಮಪುರುಷೇಭ್ಯಃ ಸ್ವಾಹಾ।

# ಬಲಿಹರಣಚಕ್ರಮ್

**ಪೂರ್ವ**

ಇಂದ್ರ ಪುರುಷೇಭ್ಯಃ ಸ್ವಾಹಾ ೧೯

ಇಂದ್ರಾಯ ಸ್ವಾಹಾ ೧೮

ಸೂರ್ಯಾಯ ಸ್ವಾಹಾ ೧

ಪ್ರಜಾಪತಯೇ ಸ್ವಾಹಾ ೨

ಅಗ್ನಯೇ ಸ್ವಾಹಾ ೩

ಪ್ರಜಾಪತಯೇ ಸ್ವಾಹಾ ೪

ಸೋಮಾಯ ವನಸ್ಪತಯೇ ಸ್ವಾಹಾ ೫

ಅಗ್ನೀಷೋಮಾಭ್ಯಾಂ ಸ್ವಾಹಾ ೬

ಇಂದ್ರಾಗ್ನಿಭ್ಯಾಂ ಸ್ವಾಹಾ ೭

ಧನ್ವಂತರಯೇ ಸ್ವಾಹಾ ೮

ದ್ಯಾವಾ ಪೃಥಿವೀಭ್ಯಾಂ ಸ್ವಾಹಾ ೯

ಇಂದ್ರಾಯ ಸ್ವಾಹಾ ೧೦

ವಿಶ್ವೇಭ್ಯೋ ದೇವೇಭ್ಯಃ ಸ್ವಾಹಾ ೧೧

ಬ್ರಹ್ಮಣೇ ಸ್ವಾಹಾ ೧೨

ಅದ್ಭ್ಯಃ ಸ್ವಾಹಾ ೧೩

ಓಷಧಿ ವನಸ್ಪತಿಭ್ಯಃ ಸ್ವಾಹಾ ೧೪

ಗೃಹಾಯ ಸ್ವಾಹಾ ೧೫

ಗೃಹದೇವತಾಭ್ಯಃ ಸ್ವಾಹಾ ೧೬

ವಾಸ್ತುದೇವತಾಭ್ಯಃ ಸ್ವಾಹಾ ೧೭

ಯಮಾಯ ಸ್ವಾಹಾ ೨೦

ಯಮಪುರುಷೇಭ್ಯಃ ಸ್ವಾಹಾ ೨೧

**ಪಶ್ಚಿಮ**

ವರುಣಾಯ ಸ್ವಾಹಾ ೨೨

ವರುಣಪುರುಷೇಭ್ಯಃ ಸ್ವಾಹಾ ೨೩

**ಉತ್ತರ**

ಸೋಮಾಯ ಸ್ವಾಹಾ ೨೪

ಸೋಮಪುರುಷೇಭ್ಯಃ ಸ್ವಾಹಾ ೨೫

ನಕ್ತಂಚಾರಿಭ್ಯಃ ಸ್ವಾಹಾ ೩೧ — ಬ್ರಹ್ಮಪುರುಷೇಭ್ಯಃ ಸ್ವಾಹಾ ೨೭ — ಸರ್ವೇಭ್ಯೋ ಭೂತೇಭ್ಯಃ ಸ್ವಾಹಾ ೨೯

ದಿವಾಚಾರಿಭ್ಯಃ ಸ್ವಾಹಾ ೩೦ — ಬ್ರಹ್ಮಣೇ ಸ್ವಾಹಾ ೨೬ — ವಿಶ್ವೇಭ್ಯೋ ದೇವೇಭ್ಯಃ ಸ್ವಾಹಾ ೨೮

ರಕ್ಷೋಭ್ಯಃ ಸ್ವಾಹಾ ೩೨

ಸ್ವಧಾ ಪಿತೃಭ್ಯಃ ೩೩ (ಅಪಸವ್ಯೇನ)

ಶ್ಯಾಮಾಯ ಶಬಲಾಯ ಸ್ವಾಹಾ ೩೪ (ಸವ್ಯೇನ)

ಸನಕಾದಿ ಮನುಷ್ಯೇಭ್ಯೋ ಹಂತ ೩೫

೨೨) ವರುಣಾಯ ಸ್ವಾಹಾ। ೨೩) ವರುಣಪುರುಷೇಭ್ಯಃ ಸ್ವಾಹಾ।

ಉತ್ತರಕ್ಕೆ-

೨೪) ಸೋಮಾಯ ಸ್ವಾಹಾ। ೨೫) ಸೋಮಪುರುಷೇಭ್ಯಃ ಸ್ವಾಹಾ।

ಚಕ್ರದ ಮಧ್ಯದಲ್ಲಿ-

೨೬) ಬ್ರಹ್ಮಣೇ ಸ್ವಾಹಾ। ೨೭) ಬ್ರಹ್ಮಪುರುಷೇಭ್ಯಃ ಸ್ವಾಹಾ

೨೮) ವಿಶ್ವೇಭ್ಯೋ ದೇವೇಭ್ಯಃ ಸ್ವಾಹಾ।

೨೯) ಸರ್ವೇಭ್ಯೋ ಭೂತೇಭ್ಯಃ ಸ್ವಾಹಾ। ೩೦) ದಿವಾಚಾರಿಭ್ಯಃ ಸ್ವಾಹಾ।

೩೧) ನಕ್ತಂಚಾರಿಭ್ಯಃ ಸ್ವಾಹಾ। ಚಕ್ರದಹೊರಗೆ-

೩೨) ರಕ್ಷೋಭ್ಯಃ ಸ್ವಾಹಾ। ೩೩) (ಅಪಸವ್ಯದಿಂದ) ಸ್ವಧಾಪಿತೃಭ್ಯಃ।

೩೪) (ಕೈತೊಳೆದುಕೊಂಡು) (ಸವ್ಯದಿಂದ) ಶ್ಯಾಮಾಯ ಶಬಲಾಯ ಸ್ವಾಹಾ।

೩೫) ಸನಕಾದಿ ಮನುಷ್ಯೇಭ್ಯೋಹಂತ।

ಉಳಿದ ಸ್ವಲ್ಪ ಅನ್ನವನ್ನು ತೆಗೆದುಕೊಂಡು ಹೊರಗೆ ಹೋಗಿ-

ಯೇಭೂತಾಃ ಪ್ರಚರಂತಿ ದಿವಾನಕ್ತಂ ಬಲಿಮಿಚ್ಛಂತೋ ವಿತುದಸ್ಯಪ್ರೇಷ್ಠಾಃ।
ತೇಭ್ಯೋ ಬಲಿಂ ಪುಷ್ಟಿಕಾಮೋ ಹರಾಮಿ ಮಯಿ ಪುಷ್ಟಿಂಪುಷ್ಟಿಪತಿರ್ದಾದಾತು ಸ್ವಾಹಾ ॥
ಐಂದ್ರವಾರುಣ ವಾಯುವ್ಯಾ ಯಾಮ್ಯಾವೈ ನೈರ್ಋತ್ಯಾಶ್ಚಯೇ।
ತೇ ಕಾಕಾಃ ಪ್ರತಿಗೃಹ್ಣಂತು ಭೂಮ್ಯಾಂ ಪಿಂಡಂ ಮಯೋಜ್ಝಿತಂ ॥
ಶ್ವ ಚಾಂಡಾಲ ಭೂತ ಪತಿತ ವಾಯಸೇಭ್ಯಃ ಅನ್ನ ಭೂಮೌವಿಕಿರೇತ್ ॥

ಸ್ವಲ್ಪವೇಳೆ ಅತಿಥಿಗಳಸಲುವಾಗಿ ಪ್ರತೀಕ್ಷೆಮಾಡಿ (ಕಾಯ್ದು) ಕೈಕಾಲುಗಳನ್ನು ತೊಳೆದುಕೊಂಡು ಒಳಗೆ ಹೋಗಬೇಕು ಹಾಗೂ ಆಚಮನ ಮಾಡಬೇಕು.

ಶಾಂತಾ ಪೃಥಿವೀ ಶಿವಮಂತರಿಕ್ಷಂ ದ್ಯೌರ್ನೋ ದೇವ್ಯಭಯಂ ನೋ ಅಸ್ತು।
ಶಿವಾ ದಿಶಃ ಪ್ರದಿಶ ಉದ್ದಿ ಶೋ ನ ಆಪೋ ವಿಶ್ವತಃ ಪರಿಪಾಂತು ಸರ್ವತಃ॥
ಓಂ ಶಾಂತಿಃ ಶಾಂತಿಃ ಶಾಂತಿಃ ॥ ಎಂದು ಹೇಳಬೇಕು.

ಯಸ್ಯಸ್ಮೃತ್ಯಾ...........ಬಲಿಕ್ರಿಯಾದಿಷು । ನ್ಯೂನಂಸಂಪೂರ್ಣತಾಂ ಯಾತು.......ಮಂತ್ರಹೀನಂ......... ರಮಾಪತೇ। ಯತ್ಕೃತಂತು ಮಯಾದೇವ ಪರಿಪೂರ್ಣಂ ತದಸ್ತುಮೇ।

ಅನೇನ ಬಲಿಹರಣ ಕರ್ಮಣಾ ಭಗವಾನ್ ಮುಖ್ಯಪ್ರಾಣಾಂತರ್ಗತ ಶ್ರೀ ವಿಷ್ಣುಃ ಪ್ರೀಯತಾಂ ಪ್ರೀತೋಭವತು।

॥ ಶ್ರೀಮಧ್ವಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು ॥

**ತುಲಸೀ ನೈವೇದ್ಯ ಗೋಗ್ರಾಸ :**

ಪೂಜಾ ಸಮಾಪ್ತಿಯಾದ ಮೇಲೆ ವೈಶ್ವದೇವ ಬಲಿಹರಣಗಳನ್ನು ಮಾಡಿ (ಏಕಾದಶೀ ಹೊರತುಪಡಿಸಿ) ನಂತರ ತುಲಸೀ ಭಾಗೀರಥೀ ಪೂಜೆ ಮಾಡಿ ನೈವೇದ್ಯ ಕೊಟ್ಟು ಗೋಗ್ರಾಸ ಕೊಡಬೇಕು.

ಸುರಭೀ ವೈಷ್ಣವೀ ಮಾತಾ ನಿತ್ಯಂ ವಿಷ್ಣುಪದಾಶ್ರಿತಾ ।
ಗೋಗ್ರಾಸಸ್ತು ಮಯಾದತ್ತಃ ಸುರಭಿಃ ಪ್ರತಿಗೃಹ್ಯತಾಂ ॥
ಗವಾಂತರ್ಯಾಮಿ ಶ್ರೀ ಗೋಪಾಲಕೃಷ್ಣಃ ಪ್ರೀಯತಾಂ ॥

ಎಂದು ಹೇಳಬೇಕು.

**ಹಸ್ತೋದಕ ಮಂತ್ರ :**

ಯತಿ ಹಸ್ತೇ ಜಲಂ ದದ್ಯಾತ್ ಭೈಕ್ಷಂ ದದ್ಯಾತ್ ಪುನರ್ಜಲಂ ।
ತದನ್ನಂ ಮೇರುಣಾ ತುಲ್ಯಂ ತಜ್ಜಲಂ ಸಾಗರೋಪಮಂ ॥
ವಟೌತು ಸಮದತ್ತಂ ಸ್ಯಾತ್ ಗೃಹಸ್ಥೇ ದ್ವಿಗುಣಂ ಭವೇತ್ ।
ವಾನಪ್ರಸ್ಥೇ ಶತಗುಣಂ ಯತೌ ದತ್ತಮನಂತಕಮ್ ॥
ಯತಿರ್ಯತ್ರ ಗೃಹೇ ಭುಂಕ್ತೇ ತತ್ರ ಭುಂಕ್ತೇ ಹರಿಃ ಸ್ವಯಂ ।
ಹರಿರ್ಯತ್ರ ಗೃಹೇ ಭುಂಕ್ತೇ ತತ್ರ ಭುಂಕ್ತೇ ಜಗತ್ರಯಮ್ ॥

ಮಂತ್ರ ಹೇಳಿ ಶ್ರೀಮಜ್ಜಯತೀರ್ಥ ಗುರ್ವಂತರ್ಗತ, ಶ್ರೀಮದ್‌ರಾಘವೇಂದ್ರ ಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಸೀತಾಪತಿ ಶ್ರೀರಾಮಚಂದ್ರಃ ಪ್ರಿಯತಾಮ್ ಹೇಳಿ ಹಸ್ತೋದಕ ಕೊಡಬೇಕು.

ನಂತರ ತೀರ್ಥವನ್ನು* ತೆಗೆದುಕೊಂಡು ಭೋಜನ ಮಾಡಬೇಕು.

– ⊙ –

---

* ನಿರ್ಮಾಲ್ಯ ತೀರ್ಥ ೩ ಸಾರೆ, ಮಹಾತೀರ್ಥ ೩ ಸಾರೆ, ಭೋಜನ ನಂತರ ೧ ಸಾರೆ, ರಾತ್ರಿ ಭೋಜನ ಕಾಲದಲ್ಲಿ ೩ ಸಾರೆ, ಒಟ್ಟು ಹತ್ತು ಸಾರೆ ತೀರ್ಥ ಪ್ರಾಶನ ಮಾಡಬೇಕು. ಏಕಾದಶಿ ದಿನದಂದು ಒಂದು ಸಾರೆ ಮಾತ್ರ ತೀರ್ಥ ತೆಗೆದುಕೊಳ್ಳಬೇಕು.

## ಬ್ರಹ್ಮಯಜ್ಞ

ಆಚಮನ ಪ್ರಾಣಾಯಾಮ ದೇಶಕಾಲೋಚ್ಚಾರಣೆ ಮಾಡಿ, ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣು ಪ್ರೀತ್ಯರ್ಥಂ ದೇವ, ಋಷಿ, ಆಚಾರ್ಯ ಪಿತೃತುಷ್ಟ್ಯರ್ಥಂ ಬ್ರಹ್ಮಯಜ್ಞೇನ ಯಕ್ಷ್ಯೇ ॥

ಓಂ ವಿದ್ಯುದಸಿ ವಿದ್ಯಮೇ ಪಾಪ್ಮಾನಮೃತಾತ್ಸತ್ಯಮುಪೈಮಿ ॥

ಈ ಮಂತ್ರದಿಂದ ಜಲವನ್ನು ಸ್ಪರ್ಶಿಸಿ ಎಡಗಾಲಿನ ಮೇಲೆ ಬಲಗಾಲನ್ನು ಇರಿಸಿ ದರ್ಭೆಯನ್ನು ಅಂಜಲಿಯಲ್ಲಿ ಮುಚ್ಚಿ ಹಿಡಿದು ಪೂರ್ವಭಾವಿಯಾಗಿ ಓಂ ಕಾರವನ್ನು ವ್ಯಾಹೃತಿಯನ್ನು ಗಾಯತ್ರೀ ಮಂತ್ರವನ್ನು ಪಾದವಾಗಿಯೂ, ಅರ್ಧವಾಗಿಯೂ, ಪೂರ್ಣ ಋಕ್ಕಾಗಿಯೂ ಪಠಿಸಬೇಕು.

ಓಂ ಭೂರ್ಭುವಃಸ್ವಃ। ತತ್ಸವಿತುರ್ವರೇಣ್ಯಂ। ಭರ್ಗೋದೇವಸ್ಯಧೀಮಹಿ ।
ಧಿಯೋ ಯೋನಃ ಪ್ರಚೋದಯಾತ್ ॥ (ಪಾದಃ)
ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯಧೀಮಹಿ ।
ಧಿಯೋ ಯೋನಃ ಪ್ರಚೋದಯಾತ್ ॥ (ಅರ್ಧಃ)
ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯ ಧೀಮಹಿ ಧಿಯೋ ಯೋನಃ
ಪ್ರಚೋದಯಾತ್ ॥ (ಋಕ್)
ಓಂ ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಂ ।
ಹೋತಾರಂ ರತ್ನಧಾತಮಮ್ ॥ (ಋಗ್ವೇದ)
ಅಗ್ನಿರ್ವೈದೇವಾನಾಮವಮೋ ವಿಷ್ಣುಃಪರಮಃ । (ಐತರೇಯ ಬ್ರಾಹ್ಮಣಂ)
ಅಥಮಹಾವ್ರತಮ್ । ಏಷಪಂಥಾ ಏತತ್‌ಕರ್ಮ ।
ಅಥಾತಃ ಸಂಹಿತಾಯಾ ಉಪನಿಷತ್ । ವಿದಾ ಮಘವನ್ವಿದಾ ।
ಮಹಾವ್ರತಸ್ಯ ಪಂಚವಿಂಶತಿಂ ಸಾಮಿಧೇನ್ಯಃ ॥ (ಐತರೇಯಾರಣ್ಯಕಂ)

ಓಂ ಇಷೇತ್ವೋರ್ಜೇತ್ವಾ (ಯಜುರ್ವೇದ)

ಓಂ ಅಗ್ನ ಆಯಾ ಹಿ ವೀತಯೇ (ಸಾಮವೇದ)

ಓಂ ಶಂನ್ನೋದೇವಿ ರಭಿಷ್ಟಯ ॥ (ಅಥರ್ವಣವೇದ)

ಅಥೈತಸ್ಯ ಸಮಾಮ್ನಾಯಸ್ಯ ಸಮಾಮ್ನಾಯಃ ಸಮಾಮ್ನಾತಃ (ನಿರುಕ್ತ)

ಮಯರಸತಜಭನಲಗಸಮ್ಮಿತಂ । (ಛಂದ)

ಗೌಃ ಗ್ಮಾ ಜ್ಮಾ ಕ್ಷ್ಮಾ । (ನಿಘಂಟು)

ಪಂಚ ಸಂವತ್ಸರಮಯಂ । (ಜ್ಯೋತಿಷ)

ಅಥ ಶಿಕ್ಷಾಂ ಪ್ರವಕ್ಷ್ಯಾಮಿ (ಶಿಕ್ಷಾ)

ವೃದ್ಧಿರಾದೈಚ್ (ವ್ಯಾಕರಣ)

ಯೋಗೀಶ್ವರಂ ಯಾಜ್ಞವಲ್ಕ್ಯಂ (ಸ್ಮೃತಿ)

ನಾರಾಯಣಂ ನಮಸ್ಕೃತ್ಯ (ಮಹಾಭಾರತ)

ನಾರಾಯಣಾಯ ಪರಿಪೂರ್ಣಗುಣಾರ್ಣವಾಯ – (ತಾತ್ಪರ್ಯ ನಿರ್ಣಯ)

ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ (ಬ್ರಹ್ಮಸೂತ್ರ)

ಜನ್ಮಾದ್ಯಸ್ಯಯತೋನ್ವಯಾದಿತರತಃ (ಭಾಗವತ)

ನಾರಾಯಣಂ ಗುಣೈಸ್ಸರ್ವೈರುದೀರ್ಣಂ ದೋಷವರ್ಜಿತಂ ।
ಜ್ಞೇಯಂ ಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ ॥
(ಅಣುಭಾಷ್ಯ)

ಓಂ ತಚ್ಛಂಯೋರಾವೃಣೀಮಹೇ.... ಶಂಚತುಷ್ಪದೇ ॥ ಈ ಮಂತ್ರವನ್ನು ಪಠಿಸಿ ಓಂ ನಮೋ ಬ್ರಹ್ಮಣೇ.... ಕರೋಮಿ ॥ ಈ ಮಂತ್ರವನ್ನು ಮೂರಾವರ್ತಿ ಪಠಿಸಬೇಕು. ಓಂ ಶಾಂತಿಃ ಶಾಂತಿಃ ಶಾಂತಿಃ ॥

ವೃಷ್ಟಿರಸಿ ವೃಶ್ಚಮೇ ಪಾಪ್ಮಾನಮೃತಾತ್ಸತ್ಯಮುಪಾಗಾಂ ॥ ಈ ಮಂತ್ರವನ್ನು ಹೇಳಿ ನಿರ್ಮಾಲ್ಯ ತೀರ್ಥದಿಂದ ತರ್ಪಣ ಕೊಡಬೇಕು –

ದೇವತರ್ಪಣಮ್ (ಸವ್ಯದಿಂದ ಬಲಗೈಯ ಬೆರಳ ತುದಿಗಳಿಂದ ಕೊಡಬೇಕು)

೧. ಓಂ ಅಗ್ನಿಸ್ತೃಪ್ಯತು ।
೨. ವಿಷ್ಣುಸ್ತೃಪ್ಯತು
೩. ಪ್ರಜಾಪತಿಸ್ತೃಪ್ಯತು ।
೪. ಬ್ರಹ್ಮಾತೃಪ್ಯತು ।
೫. ವೇದಾಸ್ತೃಪ್ಯಂತು ।
೬. ದೇವಾಸ್ತೃಪ್ಯಂತು ।
೭. ಋಷಯಸ್ತೃಪ್ಯಂತು ।
೮. ಸರ್ವಾಣಿಛಂದಾಂಸಿತೃಪ್ಯಂತು ।
೯. ಓಂಕಾರಸ್ತೃಪ್ಯತು ।
೧೦. ವಷಟ್ಕಾರಸ್ತೃಪ್ಯತು ।
೧೧. ವ್ಯಾಹೃತಯಸ್ತೃಪ್ಯಂತು ।
೧೨. ಸಾವಿತ್ರೀ ತೃಪ್ಯತು ।
೧೩. ಯಜ್ಞಾಸ್ತೃಪ್ಯಂತು ।
೧೪. ದ್ಯಾವ್ಯಾಪೃಥಿವೀ ತೃಪ್ಯೇತಾಂ ।

೧೫. ಅಂತರಿಕ್ಷಂ ತೃಪ್ಯತು । ೧೬. ಅಹೋರಾತ್ರಾಣಿ ತೃಪ್ಯಂತು ।
೧೭. ಸಾಂಖ್ಯಾಸ್ಸ್ತೃಪ್ಯಂತು । ೧೮. ಸಿದ್ಧಾಸ್ಸ್ತೃಪ್ಯಂತು ।
೧೯. ಸಮುದ್ರಾಸ್ಸ್ತೃಪ್ಯಂತು । ೨೦. ನದ್ಯಸ್ಸ್ತೃಪ್ಯಂತು ।
೨೧. ಗಿರಯಸ್ಸ್ತೃಪ್ಯಂತು । ೨೨. ಕ್ಷೇತ್ರೌಷಧಿ ವನಸ್ಪತಿ ಗಂಧರ್ವಾಪ್ಸರಸಸ್ಸ್ತೃಪ್ಯಂತು ।
೨೩. ನಾಗಾಸ್ಸ್ತೃಪ್ಯಂತು । ೨೪. ವಯಾಂಸಿತೃಪ್ಯಂತು ।
೨೫. ಗಾವಸ್ಸ್ತೃಪ್ಯಂತು । ೨೬. ಸಾಧ್ಯಾಸ್ಸ್ತೃಪ್ಯಂತು ।
೨೭. ವಿಪ್ರಾಸ್ಸ್ತೃಪ್ಯಂತು । ೨೮. ಯಕ್ಷಾಸ್ಸ್ತೃಪ್ಯಂತು ।
೨೯. ರಕ್ಷಾಂಸಿತೃಪ್ಯಂತು । ೩೦. ಭೂತಾನಿತೃಪ್ಯಂತು ।
೩೧. ಏವಮಂತಾನಿ ತೃಪ್ಯಂತು ।

ಋಷಿತರ್ಪಣಮ್ (ಮಾಲಾಕಾರದಿಂದ ಬಲಗೈಯ ಕಿರಿಬೆರಳ ತಳದಿಂದ ಕೊಡಬೇಕು)

೧. ಓಂ ಶತರ್ಚಿನಸ್ಸ್ತೃಪ್ಯಂತು । ೨. ಮಾಧ್ಯಮಾಸ್ಸ್ತೃಪ್ಯಂತು ।
೩. ಗೃತ್ಸಮದಸ್ಸ್ತೃಪ್ಯತು । ೪. ವಿಶ್ವಾಮಿತ್ರಸ್ಸ್ತೃಪ್ಯತು ।
೫. ವಾಮದೇವಸ್ಸ್ತೃಪ್ಯತು । ೬. ಅತ್ರಿಸ್ತೃಪ್ಯತು ।
೭. ಭರದ್ವಾಜಸ್ಸ್ತೃಪ್ಯತು । ೮. ವಸಿಷ್ಠಸ್ಸ್ತೃಪ್ಯತು ।
೯. ಪ್ರಗಾಥಾಸ್ಸ್ತೃಪ್ಯಂತು । ೧೦. ಪಾವಮಾನ್ಯಸ್ಸ್ತೃಪ್ಯಂತು ।
೧೧. ಕ್ಷುದ್ರಸೂಕ್ತಾಸ್ಸ್ತೃಪ್ಯಂತು । ೧೨. ಮಹಾಸೂಕ್ತಾಸ್ಸ್ತೃಪ್ಯಂತು ॥

ಆಚಾರ್ಯ ತರ್ಪಣಮ್ (ಅಪಸವ್ಯದಿಂದ ಬಲಗೈಯ ಹೆಬ್ಬೆರಳು ತರ್ಜನಿಗಳ ಮಧ್ಯದಿಂದ ಕೊಡಬೇಕು)

೧. ಓಂ ಸುಮಂತು ಜೈಮಿನಿ ವೈಶಂಪಾಯನ ಪೈಲಸೂತ್ರ ಭಾಷ್ಯಭಾರತ ಮಹಾಭಾರತ-ಧರ್ಮಾಚಾರ್ಯಾಸ್ಸ್ತೃಪ್ಯಂತು ।
೨. ಜಾನಂತಿ ಬಾಹವಿ ಗಾರ್ಗ್ಯ ಗೌತಮ ಶಾಕಲ್ಯ ಬಾಭ್ರವ್ಯ ಮಾಂಡವ್ಯ – ಮಾಂಡೂಕೇಯಾಸ್ಸ್ತೃಪ್ಯಂತು ।
೩. ಗಾರ್ಗೀ ವಾಚಕ್ನವೀತೃಪ್ಯತು । ೪. ವಡವಾ ಪ್ರಾತಿಥೇಯಿತೃಪ್ಯತು ।
೫. ಸುಲಭಾ ಮೈತ್ರೇಯಿತೃಪ್ಯತು । ೬. ಕಹೋಳಂ ತರ್ಪಯಾಮಿ ।
೭. ಕೌಷೀತಕಂ ತರ್ಪಯಾಮಿ । ೮. ಮಹಾಕೌಷೀತಕಂ ತರ್ಪಯಾಮಿ ।
೯. ಭರದ್ವಾಜಂ ತರ್ಪಯಾಮಿ । ೧೦. ಪೈಂಗ್ಯಂ ತರ್ಪಯಾಮಿ ।
೧೧. ಮಹಾಪೈಂಗ್ಯಂ ತರ್ಪಯಾಮಿ । ೧೨. ಸುಯಜ್ಞಂ ತರ್ಪಯಾಮಿ ।
೧೩. ಸಾಂಖ್ಯಾಯನಂ ತರ್ಪಯಾಮಿ । ೧೪. ಐತರೇಯಂ ತರ್ಪಯಾಮಿ ।

೧೫. ಮಹೈತರೇಯಂ ತರ್ಪಯಾಮಿ ।
೧೭. ಬಾಷ್ಕಲಂ ತರ್ಪಯಾಮಿ ।
೧೯. ಔದವಾಹಿಂ ತರ್ಪಯಾಮಿ ।
೨೧. ಸೌಜಾಮಿಂ ತರ್ಪಯಾಮಿ ।
೨೩. ಆಶ್ವಲಾಯನಂ ತರ್ಪಯಾಮಿ ।
೧೬. ಶಾಕಲಂ ತರ್ಪಯಾಮಿ ।
೧೮. ಸುಜಾತವಕ್ತ್ರಂತರ್ಪಯಾಮಿ ।
೨೦. ಮಹೌದವಾಹಿಂ ತರ್ಪಯಾಮಿ ।
೨೨. ಶೌನಕಂ ತರ್ಪಯಾಮಿ ।
೨೪. ಯೇ ಚಾನ್ಯೇ ಆಚಾರ್ಯಾಃ ತೇಸರ್ವೇ ತೃಪ್ಯಂತು ತೃಪ್ಯಂತು ತೃಪ್ಯಂತು

(ಇಲ್ಲಿಯವರೆಗೆ ತಂದೆಯಿದ್ದರೂ ಮಾಡಬಹುದು.)

ಪಿತೃತರ್ಪಣಕ್ರಮ : (ಅಪಸವ್ಯದಿಂದ)

ಅಸ್ಮತ್ ಪಿತರಂ.... ಶರ್ಮಾಣಂ.... ಗೋತ್ರಂ.... ವಸ್ವಂತರ್ಗತ ಮುಖ್ಯ ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ – ೩

ಅಸ್ಮತ್ ಪಿತಾಮಹಂ.... ಶರ್ಮಾಣಂ.... ಗೋತ್ರಂ.... ರುದ್ರಾಂತರ್ಗತ ಮುಖ್ಯಪ್ರಾಣಾಂತರ್ಗತ ಸಂಕರ್ಷಣಂ ಸ್ವಧಾನಮಸ್ತರ್ಪಯಾಮಿ – ೩

ಅಸ್ಮತ್ ಪ್ರಪಿತಾಮಹಂ.... ಶರ್ಮಾಣಂ.... ಗೋತ್ರಂ.... ಆದಿತ್ಯಾಂತರ್ಗತ ಮುಖ್ಯಪ್ರಾಣಾಂತರ್ಗತ ವಾಸುದೇವಂ ಸ್ವಧಾನಮಸ್ತರ್ಪಯಾಮಿ – ೩

ಅಸ್ಮತ್ ಮಾತರಂ.... ದಾಂ.... ಗೋತ್ರಾಂ.... ವಸ್ವಂತರ್ಗತ ಮುಖ್ಯ ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ – ೩

ಅಸ್ಮತ್ ಪಿತಾಮಹೀಂ.... ದಾಂ.... ಗೋತ್ರಾಂ.... ರುದ್ರಾಂತರ್ಗತ ಮುಖ್ಯ ಪ್ರಾಣಾಂತರ್ಗತ ಸಂಕರ್ಷಣಂ ಸ್ವಧಾನಮಸ್ತರ್ಪಯಾಮಿ – ೩

ಅಸ್ಮತ್ ಪ್ರಪಿತಾಮಹೀಂ.... ದಾಂ.... ಗೋತ್ರಾಂ....ಆದಿತ್ಯಾಂತರ್ಗತ ಮುಖ್ಯ ಪ್ರಾಣಾಂತರ್ಗತ ವಾಸುದೇವಂ ಸ್ವಧಾನಮಸ್ತರ್ಪಯಾಮಿ – ೩

ಅಸ್ಮತ್ ಸಾಪತ್ನಜನನೀಂ.... ದಾಂ.... ಗೋತ್ರಾಂ.... ವಸ್ವಂತರ್ಗತ ಮುಖ್ಯ ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ – ೩

ಅಸ್ಮತ್ ಮಾತಾಮಹಂ.... ಶರ್ಮಾಣಂ.... ಗೋತ್ರಂ.... ವಸ್ವಂತರ್ಗತ ಮುಖ್ಯ ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ – ೩

ಅಸ್ಮತ್ ಮಾತುಃ ಪಿತಾಮಹಂ.... ಶರ್ಮಾಣಂ.... ಗೋತ್ರಂ.... ರುದ್ರಾಂತರ್ಗತ ಮುಖ್ಯಪ್ರಾಣಾಂತರ್ಗತ ಸಂಕರ್ಷಣಂ ಸ್ವಧಾನಮಸ್ತರ್ಪಯಾಮಿ – ೩

ಅಸ್ಮತ್ ಮಾತು: ಪ್ರಪಿತಾಮಹಂ.... ಶರ್ಮಾಣಂ.... ಗೋತ್ರಂ.... ಆದಿತ್ಯಾಂತರ್ಗತ
ಮುಖ್ಯಪ್ರಾಣಾಂತರ್ಗತ ವಾಸುದೇವಂ ಸ್ವಧಾನಮಸ್ತರ್ಪಯಾಮಿ–೩

ಅಸ್ಮತ್ ಮಾತಾಮಹೀಂ.... ದಾಂ.... ಗೋತ್ರಾಂ.... ವಸ್ವಂತರ್ಗತ ಮುಖ್ಯ
ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ–೧

ಅಸ್ಮತ್ ಮಾತುಃ ಪಿತಾಮಹೀಂ.... ದಾಂ ಗೋತ್ರಾಂ.... ರುದ್ರಾಂತರ್ಗತ ಮುಖ್ಯ
ಪ್ರಾಣಾಂತರ್ಗತ ಸಂಕರ್ಷಣಂ ಸ್ವಧಾನಮಸ್ತರ್ಪಯಾಮಿ–೧

ಅಸ್ಮತ್ ಮಾತುಃ ಪ್ರಪಿತಾಮಹೀಂ.... ದಾಂ.... ಗೋತ್ರಾಂ.... ಆದಿತ್ಯಾಂತರ್ಗತ
ಮುಖ್ಯಪ್ರಾಣಾಂತರ್ಗತ ವಾಸುದೇವಂ ಸ್ವಧಾನಮಸ್ತರ್ಪಯಾಮಿ–೧

ಆತ್ಮ ಪತ್ನೀಂ.... ದಾಂ.... ಗೋತ್ರಾಂ....ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ
ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ–೨

ಅಸ್ಮತ್ ಸಪತ್ನೀಕಂ.... (ಸುತಂ) ಶರ್ಮಾಣಂ.... ಗೋತ್ರಂ ವಸ್ವಂತರ್ಗತ ಮುಖ್ಯ
ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ–೧

ಅಸ್ಮತ್ ಭ್ರಾತರಂ.... ಶರ್ಮಾಣಂ.... ಗೋತ್ರಂ.... ವಸ್ವಂತರ್ಗತ ಮುಖ್ಯ
ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ–೧

ಅಸ್ಮತ್ ಪಿತೃವ್ಯಂ.... ಶರ್ಮಾಣಂ.... ಗೋತ್ರಂ.... ವಸ್ವಂತರ್ಗತ ಮುಖ್ಯ
ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ–೧

ಅಸ್ಮತ್ ಮಾತುಲಂ.... ಶರ್ಮಾಣಂ.... ಗೋತ್ರಂ.... ವಸ್ವಂತರ್ಗತ ಮುಖ್ಯ
ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ–೧

ಅಸ್ಮತ್ ದುಹಿತರಂ.... (ಸಭರ್ತೃಕಾಂ ಸಸುತಾಂ) ಶರ್ಮಾಣಂ.... ಗೋತ್ರಂ....
ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ-೧

ಅಸ್ಮತ್ ಭಗಿನೀಂ.... ದಾಂ.... ಗೋತ್ರಾಂ.... ವಸ್ವಂತರ್ಗತ ಮುಖ್ಯಪ್ರಾಣಾಂತರ್ಗತ
ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ–೧

ಅಸ್ಮತ್ ಪಿತೃಸ್ವಸಾರಂ.... ದಾಂ.... ಗೋತ್ರಾಂ.... ವಸ್ವಂತರ್ಗತ ಮುಖ್ಯ
ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ–೧

ಅಸ್ಮತ್ ಮಾತೃಸ್ವಸಾರಂ.... ದಾಂ.... ಗೋತ್ರಾಂ.... ವಸ್ವಂತರ್ಗತ ಮುಖ್ಯ
ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ–೧

ಅಸ್ಮತ್ ಶ್ವಶುರಂ (ಸಪತ್ನೀಕಂ).... ಶರ್ಮಾಣಂ.... ಗೋತ್ರಂ.... ವಸ್ವಂತರ್ಗತ
ಮುಖ್ಯಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ–೧

ಅಸ್ಮತ್ ಗುರುಂ.... ಶರ್ಮಾಣಂ.... ಗೋತ್ರಂ.... ವಸ್ವಂತರ್ಗತ ಮುಖ್ಯ
ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ – ೨

ಅಸ್ಮತ್ ಆಚಾರ್ಯಂ.... ಶರ್ಮಾಣಂ.... ಗೋತ್ರಂ.... ವಸ್ವಂತರ್ಗತ ಮುಖ್ಯ
ಪ್ರಾಣಾಂತರ್ಗತ ಪ್ರದ್ಯುಮ್ನಂ ಸ್ವಧಾನಮಸ್ತರ್ಪಯಾಮಿ – ೨

ಆಬ್ರಹ್ಮಸ್ತಂಭ ಪರ್ಯಂತಂ ದೇವರ್ಷಿಪಿತೃಮಾನವಾಃ ।
ತೃಪ್ಯಂತುಪಿತರಃ ಸರ್ವೇ ಮಾತೃಮಾತಾಮಹಾದಯಃ ॥
ಅತೀತ ಕುಲಕೋಟೀನಾಂ ಸಪ್ತದ್ವೀಪ ನಿವಾಸಿನಾಂ ।
ಆಬ್ರಹ್ಮಭುವನಾಲ್ಲೋಕಾದಿದಮಸ್ತು ಕುಶೋದಕಂ ॥
ಯೇ ಕೇ ಚಾಸ್ಮತ್ಕುಲೇ ಜಾತಾ ಅಪುತ್ರಾ ಗೋತ್ರಿಣೋ ಮೃತಾಃ ।
ತೇಗೃಹ್ಣಂತು ಮಯಾ ದತ್ತಂ ಸೂತ್ರ ನಿಷ್ಪೀಡನೋದಕಂ ॥
ಯಸ್ಯಸ್ಮೃತ್ಯಾಚ.... ಪರಿಪೂರ್ಣಂ ತದಸ್ತುಮೇ ॥

ಅನೇನ ಬ್ರಹ್ಮಯಜ್ಞೇನ ದೇವರ್ಷ್ಯಾಚಾರ್ಯ ಪಿತೃತರ್ಪಣೇನ ಭಗವಾನ್ ಶ್ರೀಮಜ್ಜನಾರ್ದನ ವಾಸುದೇವಃ ಪ್ರೀಯತಾಂ ಪ್ರೀತೋಭವತು ॥
ಶ್ರೀ ಮಧ್ವಾಂತರ್ಗತ ಶ್ರೀ ಕೃಷ್ಣಾರ್ಪಣಮಸ್ತು ॥ ದ್ವಿರಾಚಾಮೇತ್ ॥ ವಿಷ್ಣವೇನಮೋ ವಿಷ್ಣವೇನಮೋ ವಿಷ್ಣವೇ ನಮಃ ॥

– ⊙ –

# ಪ್ರಾಣಾಗ್ನಿಹೋತ್ರ (ಭೋಜನ)ಕ್ರಮ

ದೇವಪೂಜೆಯನ್ನು ಮಾಡಿದನಂತರ ವೈಶ್ವದೇವ ಬಲಿಹರಣಗಳನ್ನು ಮುಗಿಸಿ ತುಲಸೀ ಭಾಗೀರಥಿಪೂಜೆಮಾಡಿ ನೈವೇದ್ಯಕೊಟ್ಟು ಗೋಗ್ರಾಸವನ್ನು ಕೊಡಬೇಕು. ಹಸ್ತೋದಕವನ್ನು ಕೊಡುವ ಸಂಪ್ರದಾಯವಿದ್ದವರು ಅದನ್ನು ಕೂಡ ಮುಗಿಸಿ ಬ್ರಾಹ್ಮಣರಿಗೆ ತೀರ್ಥವನ್ನು ಕೊಟ್ಟು ತಾನು ತೀರ್ಥವನ್ನು ತೆಗೆದುಕೊಳ್ಳಬೇಕು.[೧]

ಚತುಷ್ಕೋಣ ಮಂಡಲವನ್ನು ಇನ್ನೊಬ್ಬರಿಂದ ಮಾಡಿಸಿ ಅಥವಾ ಎಡಗೈಯಿಂದ ತಾನೇ ಮಾಡಿ ವಟ, ಅರ್ಕ, ಅಶ್ವತ್ಥ ಪತ್ರಗಳನ್ನೂ, ತಾಮ್ರಾದಿ ಧಾತುಮಯ ಪಾತ್ರೆಗಳನ್ನು ಬಿಟ್ಟು, ಶಾಸ್ತ್ರವಿಹಿತವಾದ ಕದಲೀ, ಪಲಾಶ, ಪದ್ಮಪತ್ರಾದಿಗಳ,[೨] ಎಲೆಯನ್ನು ಮಂಡಲದಮೇಲೆ ಇಟ್ಟು ತುಪ್ಪ ಹಾಗೂ ಎಲ್ಲ ಭೋಜ್ಯಪದಾರ್ಥಗಳನ್ನು ಬಡಿಸಿ ತಾನು ಉತ್ತರ ಅಥವಾ ಪೂರ್ವಾಭಿಮುಖನಾಗಿ ಕುಳಿತು ೫ ತುಳಸೀದಳಗಳನ್ನು ಅನ್ನದ ಮೇಲಿಟ್ಟು ತುಳಸೀದಳ ಸಹಿತ ತೀರ್ಥದಿಂದ ಓಂ ಭೂರ್ಭುವಃಸ್ವಃ ಮಂತ್ರದಿಂದ ಅನ್ನಕ್ಕೆ ಪ್ರೋಕ್ಷಣ ಮಾಡಬೇಕು.

**ಸಂಕಲ್ಪ :** ಮುಖೇ ಆವಹನೀಯಂ, ಹೃದಯೇ ಗಾರ್ಹಪತ್ಯಂ, ನಾಭೌದಕ್ಷಿಣಾಗ್ನಿಃ, ನಾಭಿದಕ್ಷಿಣಭಾಗೇ ಸಭ್ಯಾಗ್ನಿಃ, ನಾಭೇಃ ಉತ್ತರಭಾಗೇ ಆವಸಥ್ಯಃ, ಪ್ರಾಣೋ ಹೋತಾ, ಅಪಾನ ಉದ್ಗಾತಾ, ವ್ಯಾನೋ ಬ್ರಹ್ಮಾ, ಉದಾನೋ ಅಧ್ವರ್ಯುಃ, ಸಮಾನೋ ಯಜಮಾನಃ, ಅಹಂಕಾರಃ ಪಶುಃ, ಓಂಕಾರೋ ಯೂಪಃ, ಬುದ್ಧಿಃ ಪತ್ನೀ, ಪೃಥ್ವೀಚಾರಣಿಃ, ವೇದೀ ಚ ಪೃಷ್ಠಃ, ರೋಮಾಣಿ ದರ್ಭಾಃ, ಜಿಹ್ವಾ ಸ್ರುಕ್‌ಸ್ರುವೌ, ಮನೋ ವಿಹರ್ತಾ, ಪ್ರಾಣಾಗ್ನಿಹೋತ್ರಂ ಕರಿಷ್ಯೇ॥

ನಂತರ ಸತ್ಯಂತ್ವರ್ತೇನ ಪರಿಷಿಂಚಾಮಿ ಎಂದು ಹೇಳುತ್ತ ಪ್ರದಕ್ಷಿಣವಾಗಿ ಪರಿಷೇಚನ ಮಾಡಿ ಚಿತ್ರಾಯನಮಃ, ಚಿತ್ರಗುಪ್ತಾಯನಮಃ[೩] ಎಂದು ಎಲೆಯ ಹೊರಗೆ

---

೧) ತೀರ್ಥಸ್ವೀಕರಿಸುವ ಕ್ರಮ ಇತ್ಯಾದಿಗಳನ್ನು ಇದೇ ಲೇಖಕರ "ಶ್ರೀ ದೇವಪೂಜಾ ಸಾರಸಂಗ್ರಹ" ಪುಸ್ತಕವನ್ನು ನೋಡಿ ತಿಳಿದುಕೊಳ್ಳಬೇಕು. (ಪುಟ ೫೨)

೨) ವಟ = ಆಲದೆಲೆ, ಅರ್ಕ = ಎಕ್ಕೆಎಲೆ, ಅಶ್ವತ್ಥ = ಅರಳೀಎಲೆ, ಇವು ತ್ಯಾಜ್ಯವಾಗಿವೆ. ಕದಲೀ = ಬಾಳೆ, ಪಲಾಶ = ಮುತ್ತಲಎಲೆ, ಪದ್ಮ = ಕಮಲದಎಲೆ ಇವುಗಳನ್ನು ಉಪಯೋಗಿಸಬಹುದು.

೩) ಇಲ್ಲಿ ಕೆಲವರು ಯಮಾಯನಮಃ, ಸರ್ವಭೂತೇಭ್ಯೋ ನಮಃ ಎಂಬುದಾಗಿ ಇನ್ನೆರಡು ಆಹುತಿಗಳನ್ನು ಇಡುವದುಂಟು. ಅವರವರ ಸಂಪ್ರದಾಯದಂತೆ ಮಾಡಬಹುದು

ಬಲಭಾಗದಲ್ಲಿ ಎರಡು ಆಹುತಿಗಳನ್ನು ಇಟ್ಟು ಕೈಯಲ್ಲಿ ತೀರ್ಥವನ್ನು, ತುಳಸಿಯನ್ನು ಹಾಕಿಕೊಂಡು-

ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ।

ಪ್ರಾಣಾಪಾನ ಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್॥ ಹೇಳಿ

ಅಮೃತೋಪಸ್ತರಣಮಸಿ ಸ್ವಾಹಾ ಎಂದು ತುಳಸೀಸಹಿತ ಆಪೋಶನವನ್ನು ತೆಗೆದುಕೊಳ್ಳಬೇಕು.

ಈ ಕೆಳಗೆ ತೋರಿಸಿದ ನಕ್ಷೆಯ ಪ್ರಕಾರ ಪಂಚಪ್ರಾಣಾಹುತಿಗಳನ್ನು ಸ್ವೀಕರಿಸಬೇಕು.[೪]

ಪಂಚಪ್ರಣಾಹುತಿಗಳನ್ನು ಪೂರ್ವದಿಕ್ಕಿನಿಂದ ಪ್ರಾರಂಭಿಸಿ ತೆಗೆದುಕೊಳ್ಳಬೇಕು.

೧) ಅಂಗುಷ್ಠ, ತರ್ಜನೀ, ಮಧ್ಯಮ ಬೆರಳುಗಳಿಂದ ೩ ಅಗಳು ಅನ್ನವನ್ನು ತೆಗೆದುಕೊಂಡು- ಓಂ ಪ್ರಾಣಾತ್ಮನೇ ವೈಶ್ವಾನರಾಯಸ್ವಾಹಾ, ಪ್ರಾಣಾತ್ಮನೇ ವೈಶ್ವಾನರಾಯ ಇದಂ ನ ಮಮ ।

೨)ಅನಾಮಿಕಾ, ಕನಿಷ್ಠ, ಅಂಗುಷ್ಠ ಬೆರಳುಗಳಿಂದ ೫ ಅಗಳು ಅನ್ನವನ್ನು ತೆಗೆದುಕೊಂಡು- ಓಂ ಅಪಾನಾತ್ಮನೇ ವೈಶ್ವಾನರಾಯಸ್ವಾಹಾ, ಅಪಾನಾತ್ಮನೇ ವೈಶ್ವಾನರಾಯ ಇದಂ ನ ಮಮ ।

೩) ಮಧ್ಯಮ, ಅನಾಮಿಕಾ, ಅಂಗುಷ್ಠ ಬೆರಳುಗಳಿಂದ ೭ ಅಗಳು ಅನ್ನವನ್ನು ತೆಗೆದುಕೊಂಡು– ಓಂ ವ್ಯಾನಾತ್ಮನೇ ವೈಶ್ವಾನರಾಯಸ್ವಾಹಾ, ವ್ಯಾನಾತ್ಮನೇ ವೈಶ್ವಾನರಾಯ ಇದಂ ನ ಮಮ ।

೪) (ಪಂಚಾಂಗುಲಿಗಳಿಂದ) ಐದು ಬೆರಳುಗಳಿಂದ ೯ ಅಗಳು ಅನ್ನವನ್ನು ತೆಗೆದುಕೊಂಡು- ಓಂ ಉದಾನಾತ್ಮನೇ ವೈಶ್ವಾನರಾಯಸ್ವಾಹಾ, ಉದಾನಾತ್ಮನೇ ವೈಶ್ವಾನರಾಯ ಇದಂ ನ ಮಮ ।

---

೪)



೫) ಕನಿಷ್ಠ, ತರ್ಜನೀ, ಅಂಗುಷ್ಠ ಬೆರಳುಗಳಿಂದ ೧೧ ಅಗಳು ಅನ್ನವನ್ನು ತೆಗೆದುಕೊಂಡು- ಓಂ ಸಮಾನಾತ್ಮನೇ ವೈಶ್ವಾನರಾಯಸ್ವಾಹಾ, ಸಮಾನಾತ್ಮನೇ ವೈಶ್ವಾನರಾಯ ಇದಂ ನ ಮಮ ।
ಎಂದು ತುಪ್ಪ ಮಿಶ್ರಿತ ಆಹುತಿಗಳನ್ನು ಮುಖದಲ್ಲಿ ಕೊಟ್ಟು[೫]

ಓಂ ಬ್ರಹ್ಮಣೇ ನಮಃ ಎಂದು ನೇತ್ರಸ್ಪರ್ಶ ಮಾಡಿಕೊಳ್ಳಬೇಕು.[೬]

ಪ್ರತಿಯೊಂದು ತುತ್ತಿಗೆ ಗೋವಿಂದನ ನಾಮ ಸಂಕೀರ್ತನೆ ಮಾಡುತ್ತ ಸಾವಧಾನವಾಗಿ ಪ್ರಸನ್ನ ಮನಸ್ಸಿನಿಂದ ಭೋಜನಮಾಡಬೇಕು.

ಭೋಜನ ಮುಗಿದಮೇಲೆ ಅಮೃತಾಪಿಧಾನಮಸಿ ಎಂದು ಹೇಳಿ ಉತ್ತರಾಪೋಶನವನ್ನು ತೆಗೆದುಕೊಳ್ಳಬೇಕು. ಸ್ವಲ್ಪ ಎಲೆಯಲ್ಲಿ ಉಳಿದ ಅನ್ನವನ್ನು, ಕುಡಿದುಳಿದ ನೀರನ್ನು ಎಲೆಯ ಎಡಭಾಗದಲ್ಲಿ ಭೂಮಿಯ ಮೇಲೆ ಹಾಕಿ ಪಿತೃತೀರ್ಥದಿಂದ ಜಲವನ್ನು ಬಿಡಬೇಕು-

• ರೌರವೇಽಪುಣ್ಯನಿಲಯೇ ಪದ್ಮಾರ್ಬುದನಿವಾಸಿನಾಂ ।
ಅರ್ಥಿನಾಮುದಕಂ ದತ್ತಂ ಅಕ್ಷಯ್ಯಮುಪತಿಷ್ಠತು । ಎಂದು ಹೇಳಬೇಕು.

ಆಮೇಲೆ ಕೈತೊಳೆದುಕೊಂಡು ೧೨ ಸಾರೆ ಬಾಯಿಮುಕ್ಕಳಿಸಿ ನಾಲ್ಕುಬಾರಿ ಆಚಮನಮಾಡಿ

ಇದಮನ್ನಂ ಪವಿತ್ರಂ ಸ್ಯಾತ್ ಪಾನೀಯಂ ಚಾತಿಪಾವನಂ ।
ಭುಕ್ತಪೀತವಿಶುದ್ಧ್ಯರ್ಥಂ ಹರೇಃ ಪಾದೋದಕಂ ಪಿಬೇತ್ ॥

ಹೇಳುತ್ತ ತೀರ್ಥವನ್ನು ಸ್ವೀಕರಿಸಿ ಹೊಟ್ಟೆಯ ಎಡಬದಿ ಮುಟ್ಟಿ ಓಂ ನಮೋ ನಾರಾಯಣಾಯ ಹೇಳಿ

ಭೋಜನಾನಂತರಂ ವಿಷ್ಣೋರರ್ಪಿತಂ ತುಳಸೀದಳಂ ।
ಭಕ್ಷಣಾತ್ ಪಾಪನಿರ್ಮುಕ್ತಃ ಚಾಂದ್ರಾಯಣ ಶತಾಧಿಕಂ ॥

ಎನ್ನುವಂತೆ ಮೂರು ತುಳಸೀದಳಗಳನ್ನು ಭಕ್ಷಿಸಬೇಕು.

" ನಂತರ ದೇವರಿಗೆ ಅರ್ಪಿತವಾದ ತಾಂಬೂಲವನ್ನು ಸ್ವೀಕರಿಸಬೇಕು. ಸ್ವಲ್ಪ ವಿಶ್ರಾಂತಿ ನಂತರ ಪಾಠ, ಪ್ರವಚನ, ಪುರಾಣ ಶ್ರವಣಾದಿಗಳನ್ನು ಮಾಡಬೇಕು.

॥ ಶ್ರೀಮಧ್ವೇಶಾರ್ಪಣಮಸ್ತು ॥



೫) ಓಂ ಪ್ರಾಣಾಯಸ್ವಾಹಾ, ಓಂ ಅಪಾನಾಯಸ್ವಾಹಾ, ಓಂ ವ್ಯಾನಾಯಸ್ವಾಹಾ, ಓಂ ಉದಾನಾಯಸ್ವಾಹಾ, ಓಂ ಸಮಾನಾಯಸ್ವಾಹಾ ॥
ಹೀಗೆ ಹೇಳುವುದು ರೂಢಿಯಲ್ಲಿದೆ

೬) ಓಂ ಬ್ರಹ್ಮಣೇ ಸ್ವಾಹಾ ಎಂಬುದಾಗಿ ಒಂದು ಆಹುತಿ ಕೊಡುವದುಂಟು. ಅವರವರ ಸಂಪ್ರದಾಯದ ಪ್ರಕಾರ ಮಾಡಬಹುದು.

## ಅನುಬಂಧ - II

# ಸ್ತ್ರೀಯರ ನಿತ್ಯ ಆಚರಣೆ (ಸ್ತ್ರೀ ಜಪ ಕ್ರಮ ಇತ್ಯಾದಿ)

ಸ್ತ್ರೀಯರು ಪ್ರಾತಃಕಾಲದಲ್ಲಿ ಬೇಗ ಎದ್ದು ಉದಯರಾಗ ಹೇಳಿ ಮನೆಯ ಮುಂದೆ ಸಾರಿಸಿ, ರಂಗವಲ್ಲಿ ಹಾಕಿ, ಪೂಜಾ, ಅಡಿಗೆ ಸಾಮಗ್ರಿಗಳನ್ನು ಸ್ವಚ್ಛವಾಗಿ ತಿಕ್ಕಿ ಸಿದ್ಧಪಡಿಸಿಕೊಂಡು ಸ್ನಾನಕ್ಕೆ ಅಣಿಯಾಗಬೇಕು.

ಮನೆಯಲ್ಲಿ ಸ್ನಾನ ಮಾಡುವುದಾದಲ್ಲಿ "ಗಂಗಾಳ"ದಲ್ಲಿ (ಬಕೀಟನಲ್ಲಿ) ಮೊದಲು ಒಂದು ತಂಬಿಗೆ ತಣ್ಣೀರು ಹಾಕಿ, ಅದರಲ್ಲಿ ಬಿಸಿ ನೀರು ಸುರುವಿ ಮತ್ತೆ ಒಂದು ತಂಬಿಗೆ ತಣ್ಣೀರು ಹಾಕಿ ಇಟ್ಟುಕೊಳ್ಳಬೇಕು. ಆ ನೀರಲ್ಲಿ ಭಾಗೀರಥಿ ಸನ್ನಿಧಾನ ಉಂಟೆಂದು ಭಾವಿಸಬೇಕು.

ಸ್ನಾನ ಸಂಕಲ್ಪವನ್ನು ಹೀಗೆ ಮಾಡಬೇಕು–

ಶ್ರೀ ಗೋವಿಂದ ಗೋವಿಂದ ಶ್ರೀಮದ್ಭಗವತೋ ಮಹಾಪುರುಷಸ್ಯ ಶ್ರೀವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಅದ್ಯ ಬ್ರಹ್ಮಣ ದ್ವಿತೀಯ ಪರಾರ್ಧೇ, ಶ್ರೀಶ್ವೇತವರಾಹಕಲ್ಪೇ, ವೈವಸ್ವತಮನ್ವಂತರೇ ಕಲಿಯುಗೇ, ಪ್ರಥಮಚರಣೇ, ಭರತವರ್ಷೇ, ಭರತಖಂಡೇ, ಜಂಬೂದ್ವೀಪೇ, ದಂಡಕಾರಣ್ಯೇ, ದೇಶೇ ಗೋದಾವರ್ಯಾಃ ದಕ್ಷಿಣೇ ತೀರೇ ಶಾಲಿವಾಹನ ಶಕೆ ಬೌದ್ಧಾವತಾರೇ, ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ಚಾಂದ್ರಮಾನೇನ ...... ಸಂವತ್ಸರೇ, ..... ಆಯನೇ ...... ಋತೌ ..... ಮಾಸೇ ..... ಪಕ್ಷೇ .... ತಿಥೌ, ....ವಾಸರೇ, ಶುಭನಕ್ಷತ್ರೇ, ಶುಭಯೋಗೇ, ಶುಭಕರಣೇ ಏವಂಗುಣ ವಿಶೇಷಣ ವಿಶಿಷ್ಟಾಯಂ ಶುಭತಿಥೌ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀವಿಷ್ಣು ಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಂ ಗಂಗಾ (ಭಾಗೀರಥಿ)ಸ್ನಾನ ಮಹಂಕರಿಷ್ಯೇ।

ನದಿ, ಸರೋವರಗಳಲ್ಲಿ ಸ್ನಾನ ಮಾಡುವುದಾದರೆ– ಮೇಲಿನಂತೆ ಸಂಕಲ್ಪ ಮಾಡಿ– ಸ್ನಾನಕ್ಕೆ ಅನುಜ್ಞೆಯನ್ನು ಕೇಳಬೇಕು.

ಕಣಕಾಲುದ್ದಾ ನೀರಾಗ ಶೇಷದೇವರ ಸನ್ನಿಧಾನ, ಮೊಣಕಾಲುದ್ದಾ ನೀರಾಗ ಗರುಡದೇವರ ಸನ್ನಿಧಾನ। ಎದೆ ಉದ್ದ ನೀರಾಗ ಲಕ್ಷ್ಮೀನಾರಾಯಣ ದೇವರ ಸನ್ನಿಧಾನ, ಅಂತಾ ಅನುಸಂಧಾನ ಮಾಡಿ ತೀರ್ಥಮೂರ್ತಿ, ವೈಕುಂಠಮೂರ್ತಿ, ವೈರಾಗ್ಯಮೂರ್ತಿ ಪಾದದಿಂದ ಹುಟ್ಟಿ, ಸ್ವರ್ಗಲೋಕದಿಂದ ಇಳಿದು ಬಂದಂಥ ಭಾಗೀರಥಿಯೇ ಮೈ

ತೊಳೆಯಲು ನನಗೆ ಅನುಜ್ಞೆ ಕೊಡು ಎಂದು ಕೇಳಿಕೊಂಡು ಸ್ನಾನ ಮಾಡಬೇಕು. (ನದಿಯಲ್ಲಿ ಸ್ನಾನ ಮಾಡುವಾಗ ನದೀತಾರತಮ್ಯ ಸ್ತೋತ್ರ, ಭಾಗೀರಥಿ ಸ್ತೋತ್ರ ಹೇಳಬೇಕು.)

ನಂತರ ಅರ್ಘ್ಯ ಕೊಡಬೇಕು –

ನಮಸ್ತೇ ಕಮಲನಾಭಾಯ ನಮಸ್ತೇ ಜಲಶಾಯಿನೇ ।
ನಮಸ್ತೇಽಸ್ತು ಹೃಷೀಕೇಶ ಗೃಹಾಣಾರ್ಘ್ಯಂ ನಮೋಽಸ್ತುತೇ ॥

ಸ್ನಾನ ಮಾಡಿ ಮೇಲೆ ಬರುವಾಗ –

ಹತ್ತಿ ಬರುವಾಗ ಅಚ್ಯುತನ್ನ ಕಂಡೆ । ತಿರುಗಿ ನೋಡಿ ತ್ರಿವಿಕ್ರಮನ ಕಂಡೆ ।
ಹಿಂದೆ ನೋಡಿ ಬಿಂದು ಮಾಧವನ್ನ ಕಂಡೆ । ಕಂಕಣ ಕೈಯಾಕಿನ್ನ ಕಂಡೆ ।
ಕುಂಕುಮ ಫಣೆಯಾಕಿನ್ನ ಕಂಡೆ । ಅರಿಷಿಣ ಕುಂಕುಮ ಫಲಕೊಟ್ಟು ತಾಯಿ ನಮ್ಮವ್ವ
ಗಂಗಾ ಭಾಗೀರಥಿ ನಿನ್ನ ಅನುಗ್ರಹ ಇರಲಿ ॥ ಎಂದಾಗಿ ಪ್ರಾರ್ಥಿಸಬೇಕು.

ಸ್ನಾನದ ನಂತರ ಶುದ್ಧವಾದ ಒಣಗಿದ ಬಟ್ಟೆ ಉಟ್ಟುಕೊಂಡು, ಆಸನದಲ್ಲಿ ಕುಳಿತು ಒಂದು ಬೊಟ್ಟು ಕುಂಕುಮ ಇಟ್ಟುಕೊಂಡು ನಂತರ ಗೋಪಿಚಂದನದಿಂದ ಅಥವಾ ಶ್ರೀವೆಂಕಪ್ಪನ ನಾಮದಿಂದ ಹಣೆಯಲ್ಲಿ ಒಂದು ಊರ್ಧ್ವಪುಂಡ್ರ ಹಚ್ಚಿಕೊಂಡು ಗದಿಯನ್ನು ಧರಿಸಬೇಕು.

**ಗದಿಮಂತ್ರ :** ಅನಂತಾಸನ, ಶ್ವೇತದ್ವೀಪ, ವೈಕುಂಠ ಇಂಥಲ್ಲಿ ಇಲ್ಲದ ಗದಿ ಎಲ್ಲಿ ಇರುವದು ಅಂದರೆ ನಾರಾಯಣನ ಕರದಲ್ಲಿ. ಆ ಗದಿಯನ್ನು ಮುತ್ತೈದೆಯರು ಹಚ್ಚಿಕೊಂಡರೆ ಮೂರು ಕೋಟಿ ಪುಣ್ಯ ಬರುವದು. ವಿಪ್ರರು ಹಚ್ಚಿಕೊಂಡರೆ ವೇದಪಾರಂಗತರು ಆಗುವರು. ಸನ್ಯಾಸಿಗಳು ಹಚ್ಚಿಕೊಂಡರೆ ಮೋಕ್ಷಕ್ಕೆ ಹೋಗುವರು. ಬಿಂದುಮಾಧವನ ದರುಶನ ಕಾಶಿಗೆ ಹೋದಷ್ಟು ಪುಣ್ಯ ಹತ್ತದ, ಪಾಪ ಹಾರತದ ಇತಿ ಗದಿ ಸ್ತೋತ್ರಂ ಸಂಪೂರ್ಣಂ ॥

**ಕುಂಕುಮ ಧಾರಣ :** ಅದ್ಯ ಪೂರ್ವೋಚ್ಚರಿತ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ ಮಮ ಪತ್ಯಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಲಕ್ಷ್ಮೀನಾರಾಯಣ ಪ್ರೀತ್ಯರ್ಥಂ ಪತ್ಯುರಾಯುಷ್ಯಾಭಿವೃದ್ಧ್ಯರ್ಥಂ ಶ್ರೀಲಕ್ಷ್ಮೀ ಸನ್ನಿಧಾನ ಪ್ರಾಪ್ತ್ಯರ್ಥಂ ಊರ್ಧ್ವಪುಂಡ್ರಸಹಿತ ಕುಂಕುಮ ಧಾರಣಾಖ್ಯಂ ಕರ್ಮ ಕರಿಷ್ಯೇ ॥ ಎಂದು ಸಂಕಲ್ಪ ಮಾಡಿ

ರಮಾಂ ಅಪರ್ಣಾಂ ಸಾವಿತ್ರೀಂ ವೈದೇಹೀಂ ಚ ಅರುಂಧತೀಂ ।
ಸೌಭಾಗ್ಯಾಯ ನಮಸ್ಕೃತ್ಯ ಕುಂಕುಮಂ ಧಾರಯಾಮ್ಯಹಂ ॥

ಎಂದು ಹೇಳುತ್ತ ಅರಿಷಿಣ ಮತ್ತು ಕುಂಕುಮ ಹಚ್ಚಿಕೊಳ್ಳಬೇಕು.

ಸುಮಂಗಲಿಯರು ಹಣೆಯಲ್ಲಿ ಊರ್ಧ್ವಪುಂಡ್ರವನ್ನು ಧರಿಸುವುದರಿಂದ ಪತಿಯ ಆಯುಷ್ಯವು ವರ್ಧಿಸುತ್ತದೆ ಮತ್ತು ಹಣೆಯಲ್ಲಿ ಕುಂಕುಮವನ್ನು ಧರಿಸುವುದರಿಂದ ಸದಾ ಲಕ್ಷ್ಮಿಯ ಸನ್ನಿಧಾನವಿರುವುದು. ಸಕಲಸಂಪತ್ತಿಗೆ ಕಾರಣವಾಗುವದು.[೧]

**ಗುರುಮಂತ್ರ :** ಶ್ರೀ ಗುರುಭ್ಯೋ ನಮಃ ॥ (ಪೂರ್ವ ಅಥವಾ ಉತ್ತರಕ್ಕೆ ಮುಖ ಮಾಡಿ ಕುಳಿತು) ಆಚಮನ- ದ್ವಿರಾಚಮ್ಯ ೧. ಕೇಶವಾಯ ಸ್ವಾಹಾ ೨. ನಾರಾಯಣಾಯ ಸ್ವಾಹಾ ೩. ಮಾಧವಾಯ ಸ್ವಾಹಾ ೪. ಗೋವಿಂದಾಯ ನಮಃ (೧ ತೀರ್ಥ ಸವುಟು ನೀರು ಬಿಡಬೇಕು.) ೫. ವಿಷ್ಣವೇ ನಮಃ ೬. ಮಧುಸೂದನಾಯ ನಮಃ ೭. ತ್ರಿವಿಕ್ರಮಾಯ ನಮಃ ೮. ವಾಮನಾಯ ನಮಃ ೯. ಶ್ರೀಧರಾಯ ನಮಃ ೧೦. ಹೃಷೀಕೇಶಾಯ ನಮಃ ೧೧. ಪದ್ಮನಾಭಾಯ ನಮಃ ೧೨. ದಾಮೋದರಾಯ ನಮಃ ೧೩. ಸಂಕರ್ಷಣಾಯ ನಮಃ ೧೪. ವಾಸುದೇವಾಯ ನಮಃ ೧೫. ಪ್ರದ್ಯುಮ್ನಾಯ ನಮಃ ೧೬. ಅನಿರುದ್ಧಾಯ ನಮಃ ೧೭. ಪುರುಷೋತ್ತಮಾಯ ನಮಃ ೧೮. ಅಧೋಕ್ಷಜಾಯ ನಮಃ ೧೯. ನಾರಸಿಂಹಾಯ ನಮಃ ೨೦. ಅಚ್ಯುತಾಯ ನಮಃ ೨೧. ಜನಾರ್ದನಾಯ ನಮಃ ೨೨. ಉಪೇಂದ್ರಾಯ ನಮಃ ೨೩. ಹರಯೇ ನಮಃ ೨೪. ಶ್ರೀಕೃಷ್ಣಾಯ ನಮಃ ॥

ಶ್ರೀ ಗೋವಿಂದ ..... ಅದ್ಯ ಬ್ರಹ್ಮಣಃ .......ಶುಭ ತಿಥೌ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಂ ಗುರುಮಂತ್ರ ಜಪಂಕರಿಷ್ಯೇ ॥

ಭೂತೋಚ್ಚಾಟನಮ್ – ಮಮ ಶರೀರಸ್ಯ ಅಂತರ್ಯಾಮಿ ಋಷಿಃ । ಸತ್ಯೋದೇವತಾ ಪ್ರಕೃತಿ ಪುರುಷಶ್ಛಂಧಃ । ಸಮಸ್ತ ಭೂತೋಚ್ಚಾಟನೇ ವಿನಿಯೋಗಃ ।

ಅಪಸರ್ಪಂತು ಯೇ ಭೂತಾಯೇ ಭೂತಾ ಭುವಿಸಂಸ್ಥಿತಾಃ । ಯೇ ಭೂತಾ ವಿಘ್ನಕರ್ತಾರಃ ತೇ ನಶ್ಯಂತು ಶಿವಾಜ್ಞಯಾ । ಅಪಕ್ರಾಮಂತು ಭೂತಾದ್ಯಾಃ ಕ್ರೂರಾಶ್ಚೈವ ತು ರಾಕ್ಷಸಾಃ । ತೇಷಾಮಪ್ಯವಿರೋಧೇನ ಬ್ರಹ್ಮಕರ್ಮ ಸಮಾರಭೇ ॥

ಪೃಥಿವ್ಯಾ ಮೇರು ಪೃಷ್ಠ ಋಷಿಃ । ಕೂರ್ಮೋದೇವತಾ । ಸುತಲಂ ಛಂದಃ । ಆಸನೇ ವಿನಿಯೋಗಃ । ಪೃಥ್ವಿತ್ವಯಾ ಧೃತಾಲೋಕಾ ದೇವಿತ್ವಂ ವಿಷ್ಣುನಾ ಧೃತಾ । ತ್ವಂಚ ಧಾರಯ ಮಾಂ ದೇವಿ ಪವಿತ್ರಂ ಕುರುಚಾಸನಂ । ಮಾಂ ಚ ಪೂತಂ ಕುರು ಧರೇ ನತೋಽಸ್ಮಿತ್ವಾಂ ಸುರೇಶ್ವರಿ । ಆಸನೇ ಸೋಮ ಮಂಡಲೇ ಕೂರ್ಮಸ್ಕಂಧೇ ಉಪವಿಷ್ಟೋಽಸ್ಮಿ ।

ಶ್ರೀಂ ಅಂ ಅನಂತಾಸನಾಯ ನಮಃ । ಶ್ರೀಂ ಮಂ ಮಂಡೂಕಾಯ ನಮಃ । ಶ್ರೀಂ ಕುಂ ಕೂರ್ಮಾಯ ನಮಃ । ಶ್ರೀ ವಂ ವರಾಹಾಯ ನಮಃ । ಶ್ರೀಂ ಶಂ ಶೇಷಾಯ ನಮಃ । ಶ್ರೀಂ ಕಂ ಕಾಲಾಗ್ನಿ ರುದ್ರಾಯ ನಮಃ । ಶ್ರೀಂ ವಂ ವಜ್ರಾಯ ನಮಃ ॥

---

೧. ಊರ್ಧ್ವಪುಂಡ್ರಂ ಲಲಾಟೇತು ಭರ್ತುರಾಯುಷ್ಯವರ್ಧಕಂ ।
ಲಲಾಟೇ ಕುಂಕುಮಶ್ಚೈವ ಸದಾ ಲಕ್ಷ್ಮೀ ನಿವಾಸಕಮ್ ॥

ಐಂದ್ರಿಯಾದಿ ದಶದಿಕ್ಷು ಬಧ್ನಾಮಿ ನಮಶ್ಚಕ್ರಾಯ ಸ್ವಾಹಾ ॥
ಅಸ್ತ್ರಾಯ ಫಟ್ ಇತಿ ದಿಗ್ಬಂಧಃ ।
ಮಣಿಬಂಧೇ ಪ್ರಕೋಷ್ಠೇ ಚ ಕೂರ್ಪರೇ ಹಸ್ತ ಸಂಧಿಷು ।
ತತ್ಪೃಷ್ಠಪಾರ್ಶ್ವಯೋಶ್ಚೈವ ಕರಶುದ್ಧಿರುದಾಹೃತಾ ॥

ಶ್ರೀಂ ಯಂ ಶ್ರೀಂ । (ಆರು ಸಲ) ಶ್ರೀಂ ರಂ ಶ್ರೀಂ (ಆರು ಸಲ) ಶ್ರೀಂ ವಂ ಶ್ರೀಂ (ಆರು ಸಲ) ಜಪಿಸುತ್ತ ಮುಂಗೈ ಪ್ರಾರಂಭ ಮಾಡಿ ಬಟ್ಟುಗಳ ಕೊನೆಯವರೆಗೆ ಎರಡೂ ಕೈಗಳ ಕೆಳಗೆ ಮುಟ್ಟಬೇಕು.

**ಗುರು ನಮಸ್ಕಾರ :** ಶ್ರೀಗುರುಭ್ಯೋ ನಮಃ, ಪರಮ ಗುರುಭ್ಯೋ ನಮಃ, ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯೇಭ್ಯೋ ನಮಃ ಶ್ರೀವೇದವ್ಯಾಸಾಯ ನಮಃ, ಶ್ರೀಭಾರತ್ಯೈ ನಮಃ, ಶ್ರೀಸರಸ್ವತ್ಯೈ ನಮಃ, ಶ್ರೀವಾಯವೇ ನಮಃ, ಶ್ರೀಬ್ರಹ್ಮಣೇ ನಮಃ ಶ್ರೀ ಲಕ್ಷ್ಮ್ಯೈ ನಮಃ, ಶ್ರೀ ನಾರಾಯಣಾಯ ನಮಃ, ಶ್ರೀಕೃಷ್ಣಾಯನಮಃ, ಶ್ರೀವಾಸುದೇವಾಯ ನಮಃ ॥

ಪಾಪಪುರುಷ ವಿಸರ್ಜನಂ–

ಹೃತ್ಕಮಲದಲ್ಲಿರುವ ನಾರಾಯಣನನ್ನು ಸುಷುಮ್ನಾ[೨] ನಾಡಿಯ ಮಾರ್ಗವಾಗಿ ಶಿರಸ್ಸಿಗೆ ತಂದು ನಿಲ್ಲಿಸಿದಂತೆ ಭಾವಿಸಬೇಕು.

ಹೊಟ್ಟೆಯ ಎಡಭಾಗವನ್ನು ಮುಟ್ಟಿ – ಬ್ರಹ್ಮಹತ್ಯಾ ಶಿರಸ್ಕಂಚ ಸ್ವರ್ಣಸ್ತೇಯಂ ಭುಜದ್ವಯಂ । ಸುರಾಪಾನ ಹೃದಾಯುಕ್ತಂ ಗುರುತಲ್ಪ ಕಟಿದ್ವಯಂ । ತತ್ಸಂಯೋಗ ಪದದ್ವಂದ್ವಮಂಗಪ್ರತ್ಯಂಗ ಪಾತಕಂ । ಉಪಪಾತಕ ರೋಮಾಣಂ ರಕ್ತಶ್ಮಶ್ರುವಿಲೋಚನಂ । ಖಡ್ಗಚರ್ಮಧರಂ ಕೃಷ್ಣಂ ಕುಕ್ಷೌಪಾಪಂ ವಿಚಂತಯೇತ್ ।

ಹೊಕ್ಕಳನ್ನು ಮುಟ್ಟಿ – ಷಟ್ಕೋಣ ಮಂಡಲ ಮಧ್ಯಸ್ಥೋ ನೀಲವರ್ಣೋ ವಾಯುಬೀಜ ವಾಚ್ಯಃ ಪ್ರದ್ಯುಮ್ನೋ ಭಗವಾನ್ ಮಚ್ಛರೀರಸ್ಥಂ ಪಾಪಪುರುಷಂ ವಾಯುನಾ ಶೋಷಯತು । ಎಂದು ಹೇಳಿ ಶ್ರೀಂ ಯಂ ಶ್ರೀಂ ಎಂದು ೬ ಸಲ ಹೇಳಿ ಪಾಪ ಪುರುಷನು ಒಣಗಿದನೆಂದು ಭಾವಿಸಬೇಕು.

ತತಸ್ತಂ ಹೃದಯ ದೇಶಮಾನೀಯ (ಅವನನ್ನು ಹೃದಯ ದೇಶಕ್ಕೆ ತಂದು) ಹೃದಯೇ ತ್ರಿಕೋಣ ಮಂಡಲ ಮಧ್ಯಸ್ಥೋ ರಕ್ತವರ್ಣೋ ಅಗ್ನಿಬೀಜ ವಾಚ್ಯಃ ಸಂಕರ್ಷಣೋ ಭಗವಾನ್ ಮಚ್ಛರೀರಸ್ಥಂ ಪಾಪ ಪುರುಷಂ ಅಗ್ನಿನಾ ನಿರ್ದಹತು. ಎಂದು

---

೨. ಸುಷುಮ್ನಾ ನಾಡಿ – ಮೂಲಾಧಾರದಿಂದ ಹೊರಟು, ದೇಹದ ಮಧ್ಯಭಾಗದಲ್ಲಿ ನೇರವಾಗಿ ಬ್ರಹ್ಮರಂಧ್ರ ಪರ್ಯಂತ ವ್ಯಾಪಿಸಿರುವ ಮಧ್ಯ ನಾಡಿಗೆ "ಸುಷುಮ್ನಾ ನಾಡಿ" ಎಂದು ಹೆಸರು.

ಹೇಳಿ ಶ್ರೀಂ ರಂ ಶ್ರೀಂ ಎಂದು ೧೨ ಸಲ ಜಪಿಸಿ ಪಾಪ ಪುರುಷನು ಸುಟ್ಟು ಹೋದನೆಂದು ಭಾವಿಸಿ ಎಡದ ಮೂಗಿನಿಂದ ಶ್ವಾಸಬಿಟ್ಟು ಆ ಬೂದಿಯನ್ನು ಹೊರಗೆ ಹಾಕಬೇಕು.

ನಂತರ ಶಿರಸ್ಸನ್ನು ಮುಟ್ಟಿ ಶಿರಸಿ ವರ್ತುಲ ಮಂಡಲ ಮಧ್ಯಸ್ಥೋ ಶ್ವೇತವರ್ಣೋ ವರುಣ ಬೀಜ ವಾಚ್ಯಃ ಶ್ರೀವಾಸುದೇವೋ ಭಗವಾನ್ ಮಚ್ಛರೀರಂ ಅಮೃತವೃಷ್ಟ್ಯಾ ವರುಣೇನ ಆಪ್ಲಾವಯತು ಎಂದು ಹೇಳಿ ಶ್ರೀಂ ವಂ ಶ್ರೀಂ ಎಂದು ೨೪ ಸಲ ಜಪಿಸಬೇಕು. ಶಿರಸ್ಸಿನಲ್ಲಿ ಕುಳಿತಿದ್ದ (ಭಗವಂತ) ನಾರಾಯಣನನ್ನು ಹೃತ್ಕಮಲಕ್ಕೆ ತಂದು ಹೃದಯದಲ್ಲಿ ಇರುವನೆಂದು ಭಾವಿಸಬೇಕು.

ಪುಣ್ಯಪುರುಷ ಚಿಂತನಂ– ಹೊಟ್ಟೆಯ ಬಲಭಾಗವನ್ನು ಮುಟ್ಟಿ- ಅಶ್ವಮೇಧ ಶಿರಸ್ಕಂಚ ಮಹಾದಾನಭುಜದ್ವಯಂ । ಸೋಮಪಾನ ಹೃದಾಯುಕ್ತಂ ಬ್ರಹ್ಮಚರ್ಯ ಕಟಿದ್ವಯಂ । ತತ್ಸಂಯೋಗ ಪದದ್ವಂದ್ವ ಸಾಂಗೋಪಾಂಗ ಶುಭತ್ರಯಂ । ಸರ್ವವ್ರತಾಂಗ ರೋಮಾಣಾ ಗುರುಸೇವಾದಿ ಲೋಚನಂ । ಸಿಂಹಾಸನೇ ಸಮಾಸೀನಂ ಸ್ವರ್ಣವರ್ಣಂ ಕಿರೀಟಿನಂ । ಗೀರ್ವಾಣ ನುತ ಪಾದಾಬ್ಜಂ ಪುಣ್ಯಂ ಹೃದಿ ವಿಭಾವಯೇತ್ ॥ ಎಂಬುದಾಗಿ ಹೇಳುತ್ತ ಪುಣ್ಯಪುರುಷನನ್ನು ಧ್ಯಾನಿಸಬೇಕು.

ಅನೇನ ಗುರುಮಂತ್ರ ಜಪೇನ ಅಸ್ಮತ್ ಪತ್ಯಂತರ್ಗತ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀ ಲಕ್ಷ್ಮೀ ವೆಂಕಟೇಶಃ ಪ್ರೀಯತಾಂ ಪ್ರೀತೋ ವರದೋ ಭವತು । ಶ್ರೀಕೃಷ್ಣಾರ್ಪಣಮಸ್ತು.

**ಶ್ರೀಕೃಷ್ಣ ಮಂತ್ರ**[೩] : ಶ್ರೀಂ ಕ್ಲೀಂ ಕೃಷ್ಣಾಯ ನಮಃ ಎಂದು ಮೂರು ಸಾರೆ ಹೇಳಿ ಪ್ರಾಣಾಯಾಮ ಮಾಡಬೇಕು.

**ಷಡಂಗನ್ಯಾಸ :**

೧. ಶ್ರೀ ಪೂರ್ಣಜ್ಞಾನಾತ್ಮನೇ ಹೃದಯಾಯ ನಮಃ ।

೨. ಪೂರ್ಣೈಶ್ವರ್ಯಾತ್ಮನೇ ಶಿರಸೇ ಸ್ವಾಹಾ ।

೩. ಪೂರ್ಣಪ್ರಭಾತ್ಮನೇ ಶಿಖಾಯೈ ವೌಷಟ್ ।

೪. ಪೂರ್ಣಾನಂದಾತ್ಮನೇ ಕವಚಾಯ ಹುಂ ।

೫. ಪೂರ್ಣತೇಜಾತ್ಮನೇ ನೇತ್ರಾಭ್ಯಾಂ ವೌಷಟ್ ।

೬. ಪೂರ್ಣಶಕ್ತ್ಯಾತ್ಮನೇ ಅಸ್ತ್ರಾಯ ಫಟ್ । ಇತಿ ದಿಗ್ಬಂಧಃ ।

ಅಸ್ಯ ಶ್ರೀಕೃಷ್ಣ ಷಡಕ್ಷರ ಮಹಾಮಂತ್ರಸ್ಯ ಬ್ರಹ್ಮಾ ಋಷಿಃ (ಶಿರಸಿ) ಗಾಯತ್ರೀ ಛಂದಃ (ಮುಖೇ) ಶ್ರೀಕೃಷ್ಣೋ ದೇವತಾ (ಹೃದಯೇ) ಶ್ರೀಕೃಷ್ಣ ಪ್ರೀತ್ಯರ್ಥೇ ಜಪೇ ವಿನಿಯೋಗಃ ॥

---

೩. ಗುರುಮಂತ್ರ, ಶ್ರೀಕೃಷ್ಣಮಂತ್ರ ಇವೆರಡನ್ನೂ ಗುರುಗಳಿಂದ, ಹಿರಿಯರಿಂದ ಉಪದೇಶ ತೆಗೆದುಕೊಂಡು ಮಾಡಬೇಕು.

**ಅಥ ಧ್ಯಾನಂ– ಈ ಧ್ಯಾನ ಶ್ಲೋಕ ಹೇಳಬೇಕು–**

ಧ್ಯಾಯೇದ್ಧರಿನ್ಮಣಿನಿಭಂ ಜಗದೇಕ ವಂದ್ಯಂ
ಸೌಂದರ್ಯಸಾರಮರಿಶಂಖವರಾಭಯಾನಿ ।
ದೋರ್ಭಿದಧಾನಮಜಿತಂ ಸರಸಂ ಚ ಭೈಷ್ಮೀ
ಸತ್ಯಾಸಮೇತಮಖಿಲಪ್ರದಮಿಂದಿರೇಶಮ್ ॥

**ಅಥ ಜಪಃ–** ಅಸ್ಮತ್ ಪತ್ಯಂತರ್ಗತ ಶ್ರೀಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀಗೋಪಾಲಕೃಷ್ಣ ಪ್ರೇರಣಯಾ ಶ್ರೀಗೋಪಾಲಕೃಷ್ಣ ಪ್ರೀತ್ಯರ್ಥಂ ಶ್ರೀಕೃಷ್ಣ ಷಡಕ್ಷರ ಮಹಾಮಂತ್ರ ಜಪತರ್ಪಣು ಚ ಕರಿಷ್ಯೇ ॥

॥ ಶ್ರೀಂ ಕ್ಲೀಂ ಕೃಷ್ಣಾಯ ನಮಃ ಶ್ರೀಂ ॥ ಈ ಮಂತ್ರವನ್ನು ೧೦೮ ಸಾರೆ ಜಪಿಸಬೇಕು. ಜಪದ ನಂತರ ಮತ್ತೆ ಷಡಂಗನ್ಯಾಸ, ಧ್ಯಾನಾದಿಗಳನ್ನು ಮಾಡಿಕೊಂಡು–

ಅನೇನ ಶ್ರೀಕೃಷ್ಣ ಷಡಕ್ಷರ ಮಹಾಮಂತ್ರ ಜಪೇನ ಅಸ್ಮತ್ ಪತ್ಯಂತರ್ಗತ ಶ್ರೀಗೋಪಾಲಕೃಷ್ಣಃ ಪ್ರೀಯತಾಂ ಎಂದು ಹೇಳಬೇಕು.

**ಅರ್ಘ್ಯಂ–** ಶ್ರೀಂ ಕ್ಲೀಂ ಕೃಷ್ಣಾಯ ನಮಃ ಶ್ರೀಂ ॥ ಇತಿ ಅರ್ಘ್ಯಂ ॥

(೧೦ ಜಪಕ್ಕೆ ಒಂದರಂತೆ ಅರ್ಘ್ಯ ಕೊಡಬೇಕು.)

ಅಚ್ಯುತಾಯ ನಮಃ, ಅನಂತಾಯ ನಮಃ, ಗೋವಿಂದಾಯ ನಮಃ ಹೇಳಬೇಕು. ಗೌರೀ ಪೂಜೆ ಮಾಡಬೇಕು. ನಂತರ ಶ್ರೀಮಧ್ವನಾಮ, ಕೇಶವನಾಮ ಇತ್ಯಾದಿಗಳನ್ನು ಹೇಳುತ್ತ ಅಡಿಗೆ ಮಾಡಿ ದೇವರಿಗೆ ನೈವೇದ್ಯಕ್ಕೆ ಇಡಬೇಕು.[೪]

ನೈವೇದ್ಯ ಇತ್ಯಾದಿಗಳು ಆದಮೇಲೆ[೫] ಪತಿಗೆ ಮಕ್ಕಳಿಗೆ ಊಟಕ್ಕೆ ಬಡಿಸಿ ತಾನು ಊಟ ಮಾಡಬೇಕು. (ಶ್ರೀಹರಿ ಸ್ಮರಣೆ ನಿರಂತರ ಮಾಡುತ್ತಿರಬೇಕು.)

– ⊙ –

---

೪. ಅಡಿಗೆ ಮಾಡುವಾಗ ಈ ಅನುಸಂಧಾನ ಇರಬೇಕು.
ಸೂರ್ಯನಾರಾಯಣ ಸಾರಥಿ ಆಗಲಿ, ಅಟ್ಟ ಅಡಿಗೆ ಅಕ್ಷಯವಾಗಲಿ, ಶ್ರೀಲಕ್ಷ್ಮೀನಾರಾಯಣನ ನೈವೇದ್ಯವಾಗಲಿ, ಲಕ್ಷ ಜನರ ಭೋಜನವಾಗಲಿ, ಶ್ರೀಲಕ್ಷ್ಮೀನಾರಾಯಣ ತೃಪ್ತನಾಗಲಿ, ಶ್ರೀಲಕ್ಷ್ಮೀನಾರಾಯಣನ ರಕ್ಷೆ ಇರಲಿ.

೫. ತುಳಸೀ ಪೂಜೆ ಮಾಡಬೇಕು. (ಸಂಪ್ರದಾಯವಿದ್ದಂತೆ ಮಾಡಬೇಕು.)

## ಅನುಬಂಧ - III

# ಗೃಹಿಣಿಯರಿಗೆ ಸಲಹೆಗಳು

### ಔಷಧೀಯ ಗುಣಗಳು

**ಹಣ್ಣುಗಳು-ಕಾಯಿಗಳು**

**೧. ದಾಳಿಂಬೆ ಹಣ್ಣು :** ಪಚನ ಶಕ್ತಿಯನ್ನು ಹೆಚ್ಚಿಸುತ್ತದೆ. ಹೃದಯಕ್ಕೆ ಬಲ ಕೊಡುತ್ತದೆ. ಕಫವನ್ನು ನಿರ್ಮೂಲಗೊಳಿಸುವದು. ಪಿತ್ತನಾಶಕವು. ಇದು ಧ್ವನಿಯ ತೊಂದರೆ ನಿವಾರಿಸುತ್ತದೆ. ದಾಳಿಂಬೆ ರಸವನ್ನು ಬಿಸಿ ಮಾಡಿ ಕುಡಿದರೆ ವಾಂತಿ ನಿಲ್ಲುತ್ತದೆ. ರಕ್ತಹೀನತೆಗೆ ದಾಳಿಂಬೆ ರಸ ಸಿದ್ಧೌಷಧವು. ಇದರ ಒಣ ತೊಗಟೆಯನ್ನು ಕುದಿಸಿ ತಯಾರಿಸಿದ ಕಷಾಯ ರಕ್ತಾತಿಸಾರವನ್ನು ತಡೆಯುತ್ತದೆ.

**೨. ಮಾವಿನಹಣ್ಣು :** ಮಾವಿನಕಾಯಿಯನ್ನು ಕರುಳಿನ ವ್ಯಾಧಿಗೆ, ಪಿತ್ತಕ್ಕೆ ಮತ್ತು ರಕ್ತದ ಕಾಯಿಲೆಗಳಿಗೆ ಉಪಯೋಗಿಸುತ್ತಾರೆ. ಓಟೆ ಬಲಿಯದಿರುವ ಕಾಯಿಯನ್ನು ಸ್ವಲ್ಪ ಉಪ್ಪು, ಜೇನುತುಪ್ಪ ಸೇರಿಸಿ ಹೊಟ್ಟೆಯಲ್ಲಿ ತೆಗೆದುಕೊಂಡರೆ ಭೇದಿ, ಆಮಶಂಕೆ, ಮೂಲವ್ಯಾಧಿ, ಅಜೀರ್ಣತೆ, ಮಲಬದ್ಧತೆಗಳು ಕಡಿಮೆಯಾಗುತ್ತವೆ. ಮಾವಿನಕಾಯಿಯ ಸಿಪ್ಪೆಯನ್ನು ಅರೆದು ಒಂದು ಲೋಟಮಜ್ಜಿಗೆ ಸೇರಿಸಿ ದಿನಕ್ಕೆ ಮೂರು ಬಾರಿ ಕುಡಿಯುವದರಿಂದ ಆಮಶಂಕೆ, ಭೇದಿ, ಕಾಲರಾ ರೋಗಗಳು ಗುಣವಾಗುತ್ತವೆ. ಮಾವಿನಹಣ್ಣನ್ನು ತಿನ್ನುವದರಿಂದ ಕಣ್ಣಿನ ಮಂದತ್ವ ಹೋಗುತ್ತದೆ. ಒಂದು ಲೋಟ ಮಾವಿನಹಣ್ಣಿನ ರಸಕ್ಕೆ ಜೇನುತುಪ್ಪ, ಹಾಲನ್ನು ಸೇರಿಸಿ ಕುಡಿದರೆ ಒಳ್ಳೆಯ ಟಾನಿಕ್ ಆಗುತ್ತದೆ. ಹಸಿವನ್ನು ಹೆಚ್ಚಿಸುತ್ತದೆ. ತೂಕವನ್ನು ಹೆಚ್ಚಿಸುತ್ತದೆ. ಒಂದು ಹಿಡಿ ಮಾವಿನ ಎಲೆಯ ಕಷಾಯವನ್ನು ದಿನಕ್ಕೆ ಮೂರು ಸಲ ತೆಗೆದುಕೊಂಡರೆ ಆಮಶಂಕೆ, ಭೇದಿಗಳು ನಿಲ್ಲುತ್ತವೆ. ಇದರಲ್ಲಿ "ಎ" ಜೀವಸತ್ವವು ಇರುತ್ತದೆ.

**೩. ನೇರಲಹಣ್ಣು :** ನೇರಳೆ ಎಲೆಯ ಚಿಗುರಿನೊಂದಿಗೆ ಮಾವಿನ ಎಲೆ ಚಿಗುರನ್ನು ಸಮಭಾಗ ಸೇರಿಸಿ ರಸ ತೆಗೆದು ೨೦ ಗ್ರಾಂ. ಗೆ ಅರ್ಧ ಲೋಟ ಹಾಲು, ಒಂದು ಚಮಚ ಸಕ್ಕರೆ ಸೇರಿಸಿ ದಿನವೂ ರಾತ್ರಿ, ಬೆಳಿಗ್ಗೆ ಒಂದೆರಡು ವಾರ ಕುಡಿದರೆ ಮೂಲವ್ಯಾಧಿಯ ಮೊಳಕೆ ಮಾಯವಾಗುತ್ತದೆ. ಹಾವು ಕಚ್ಚಿದರೆ ಒಂದು ಲೋಟ ಹಸಿ ಎಲೆಯ ರಸವನ್ನು ಕುಡಿಸಿದರೆ ವಿಷ ಪರಿಹಾರವಾಗುತ್ತದೆ. ಈ ಹಣ್ಣಿನ ಜೊತೆ ಉಪ್ಪು, ಮೆಣಸಿನಕಾಯಿ, ಶುಂಠಿ ಅಜವಾನಗಳನ್ನು ಸೇರಿಸಿ ತಿಂದರೆ ಕಫ, ವಾತ, ಪಿತ್ತಗಳು ನಿವಾರಣೆಯಾಗುತ್ತವೆ. ಈ ಹಣ್ಣು ತಿಂದರೆ ಹಸಿವು ಹೆಚ್ಚುತ್ತದೆ. ಒಂದು ಲೋಟ ನೇರಳೆರಸಕ್ಕೆ ಜೇನನ್ನು ಸೇರಿಸಿ

ಕುಡಿಯುವದರಿಂದ ಬೇಸಿಗೆಯಲ್ಲಿ ಶರೀರ ತಂಪಾಗಿರುತ್ತದೆ. ಈ ಹಣ್ಣು ಮತ್ತು ಹಣ್ಣಿನ ಬೀಜ ಯಕೃತ್ತಿನ ಕಾರ್ಯವನ್ನು ಸುಧಾರಿಸುತ್ತದೆ.

**೪. ಸೇಬುಹಣ್ಣು :** ಇದನ್ನು ಅಗೆದು ತಿನ್ನುವದರಿಂದ ಹಲ್ಲಿನ ಸಂದುಗೊಂದುಗಳಲ್ಲಿರುವ ಬ್ಯಾಕ್ಟೀರಿಯಾಗಳು ನಾಶ ಹೊಂದಿ ಅವುಗಳಿಂದ ಉಂಟಾಗಬಹುದಾದ ಹಲ್ಲುನೋವು, ಹಲ್ಲಿನ ಹುಳುಕು ಕಡಿಮೆಯಾಗುತ್ತವೆ. ಆರೋಗ್ಯವರ್ಧಕವೂ ಇದಾಗಿದೆ. (ಟಾನಿಕ್ ಆಗಿ ಕೆಲಸ ಮಾಡುತ್ತದೆ.)

**೫. ಬಾಳೆಹಣ್ಣು :** ಮಲಬದ್ಧತೆ ಇರುವವರು ರಾತ್ರಿ ಮಲಗುವ ಮುನ್ನ ಒಂದು ಬಾಳೆಹಣ್ಣನ್ನು ಸೇವಿಸಿದರೆ ಪ್ರಾತಃಕಾಲ ಸುಖವಾಗಿ ಮಲಪ್ರವೃತ್ತಿ ಆಗುತ್ತದೆ. ಎದೆ ಉರಿ (ಆಮ್ಲಪಿತ್ತ) ಹುಳಿ ತೇಗು ಬರುವವರಿಗೆ ಬಾಳೆಹಣ್ಣಿನ ಸೇವನೆ ಪರಿಹಾರ ನೀಡುತ್ತದೆ. ಪ್ರತಿದಿನ ರಾತ್ರಿ ಒಂದು ಬಾಳೆಹಣ್ಣು, ಒಂದು ಏಲಕ್ಕಿ ತಪ್ಪದೇ ಸೇವಿಸಿದರೆ ಮೂಲವ್ಯಾಧಿ ಕಡಿಮೆಯಾಗುತ್ತದೆ. ಬಾಳೆದಿಂಡಿನ ರಸವನ್ನು ಸೇವಿಸಿದರೆ ಮೂತ್ರಕೋಶದಲ್ಲಿ ಆಗುವ ಕಲ್ಲನ್ನು ನಿವಾರಿಸಬಹುದು. ಬಾಳೆದಿಂಡಿನ ಪಲ್ಯ ಸೇವಿಸಿದರೆ ಹಸಿವು ಹೆಚ್ಚುತ್ತದೆ.

**೬. ಕಿತ್ತಳೆಹಣ್ಣು :** ಇದು ದೇಹಕ್ಕೆ ಬೇಕಾಗುವ 'ಸಿ' ಜೀವಸತ್ವವನ್ನು ಒದಗಿಸುತ್ತದೆ. ಇದರ ಸೇವನೆಯಿಂದ ಹಲ್ಲು, ವಸಡುಗಳು ಗಟ್ಟಿಯಾಗಿಯೂ, ಆರೋಗ್ಯಯುತವಾಗಿಯೂ ಆಗುತ್ತವೆ.

**೭. ಪೇರಲಹಣ್ಣು :** ಇದು ದೇಹಕ್ಕೆ 'ಸಿ' ಜೀವಸತ್ವವನ್ನು ಒದಗಿಸುತ್ತದೆ. ದೇಹದ ಆರೋಗ್ಯವನ್ನು ಸರಿಯಾಗಿ ಕಾಪಾಡುತ್ತದೆ. ಮಧುಮೇಹ ರೋಗಿಗಳು ಇದನ್ನು ಸೇವಿಸಿದರೆ ಒಳ್ಳೆಯದು.

**೮. ದ್ರಾಕ್ಷಿಹಣ್ಣು :** ಇದನ್ನು ಸೇವಿಸುವದರಿಂದ ದೇಹದಲ್ಲಿ ಎಲುಬು ಮತ್ತು ರಕ್ತವರ್ಧನೆಗೆ ಸಹಾಯವಾಗುತ್ತದೆ.

**೯. ನಿಂಬೆಹಣ್ಣು :** ಇದನ್ನು ದಿನವೂ ಜೇನುತುಪ್ಪದೊಂದಿಗೆ ಸೇವಿಸಿದರೆ ರಕ್ತಶುದ್ಧಿಯು ಆಗುತ್ತದೆ. ಕೂದಲಿಗೆ ನಿಂಬೆರಸ ತಿಕ್ಕಿ ಸ್ನಾನ ಮಾಡಿದರೆ ತಲೆಹೊಟ್ಟು ಕಡಿಮೆಯಾಗುತ್ತದೆ. ನಿಂಬೆರಸಕ್ಕೆ ಅರಿಶಿನ ಪುಡಿ ಸೇರಿಸಿ ಮೊಡವೆಗಳಿಗೆ ಲೇಪಿಸಿದರೆ ಅವು ಮಾಯವಾಗುತ್ತವೆ. ಗರ್ಭಿಣಿಯರ ಮೊದಲ ಮೂರು ತಿಂಗಳಲ್ಲಿ ಆಗುವ ವಾಂತಿ ನಿಲ್ಲಿಸಲು ನಿಂಬೆ ಶರಬತ್ತು ಸಹಕಾರಿಯಾಗಿದೆ.

### ತರಕಾರಿಗಳು :

**೧. ಕೊತ್ತಂಬರಿ :** ಇದರ ಸೊಪ್ಪಿನ ರಸವು ಶೀತಗುಣವುಳ್ಳದ್ದು. ಮೆದುಳಿಗೆ ಬಲದಾಯಕವು ಮಲಬದ್ಧತೆ ಇದ್ದವರು ಇದನ್ನು ಉಪಯೋಗಿಸಬಾರದು. ಸೊಪ್ಪನ್ನು ಅರೆದು ಗಂಡಮಾಲೆಗೆ ಲೇಪಿಸಿದರೆ ಗುಣವಾಗುವದು. ಮೂಗಿನಿಂದ ರಕ್ತ ಸೋರಿದಾಗ ಇದರ ರಸವನ್ನು ಮೂಗಿನೊಳಗೆ ಹಾಕಬೇಕು. ಇದರ ಬೀಜಗಳಾದ ಹವೀಜ ಮತ್ತು ಶುಂಠಿ ಪುಡಿಗಳ ಕಷಾಯ ಮಾಡಿ ಹಾಲುಸೇರಿಸಿ ಕುಡಿದರೆ 15 ದಿನಗಳಲ್ಲಿ ಹಸಿವು ಹೆಚ್ಚಾಗುತ್ತದೆ.

ಅಕ್ಕಿ ತೊಳೆದ ನೀರಲ್ಲಿ ಒಂದು ಚಮಚೆಯಷ್ಟು ಹವೀಜಗಳನ್ನು ಅರೆದು ಪ್ರತಿನಿತ್ಯ ಮೂರು ಬಾರಿ ಸೇವಿಸಿದರೆ ಗರ್ಭವು ಸ್ಥಿರವಾಗುವದು.

೨. **ಕರಿಬೇವು :** ಕರಿಬೇವಿನಲ್ಲಿ ಒಳ್ಳೆಯ ಅಗ್ನಿದೀಪನ ಗುಣವಿರುವುದರಿಂದ ಜೀರ್ಣಾಂಗಗಳನ್ನು ಉತ್ತೇಜಿಸಿ ತಿಂದ ಆಹಾರವು ಸುಲಭವಾಗಿ ಜೀರ್ಣವಾಗುವಂತೆ ಮಾಡುತ್ತದೆ. ಇದು ದೇಹದಲ್ಲಿಯ ಪಿತ್ತ ಮತ್ತು ಕಫ ದೋಷವನ್ನು ಕಡಿಮೆ ಮಾಡುತ್ತದೆ. ಇದು ಕ್ರಿಮಿನಾಶಕವೂ ಆಗಿದೆ. ಮಧುಮೇಹ ರೋಗಿಗಳು ಪ್ರತಿದಿನ ಬೆಳಿಗ್ಗೆ ಖಾಲಿ ಹೊಟ್ಟೆಯಲ್ಲಿ ಕರಿಬೇವಿನ ಹಸಿ ಎಲೆಗಳನ್ನು ತಿಂದರೆ ರೋಗವು ಹಿಡಿತದಲ್ಲಿ ಬರುತ್ತದೆ. ಅಗಿದು ತಿನ್ನಲಾಗದಿದ್ದರೆ ಅದರ ಚಟ್ನಿಯನ್ನು ಮಾಡಿ ತಿನ್ನಬೇಕು. ಪಿತ್ತ ಹೆಚ್ಚಾದಾಗ ಅಜೀರ್ಣವಾಗಿ ವಾಂತಿಯಾಗುತ್ತದೆ. ಆಗ ೮-೧೦ ಕರಿಬೇವಿನ ಎಲೆಗಳಿಗೆ ೧/೪ ಚಮಚ ಜೀರಿಗೆ ಸೇರಿಸಿ ನುಣ್ಣಗೆ ಅರೆದು ಒಂದು ಲೋಟ ಕಡೆದ ಮಜ್ಜಿಗೆಯಲ್ಲಿ ಕದಡಿ ಅದಕ್ಕೆ ಸ್ವಲ್ಪ ಸೈಂಧವ ಉಪ್ಪು ಸೇರಿಸಿ ಕುಡಿದರೆ ವಾಂತಿ ನಿಲ್ಲುತ್ತದೆ. ಪಿತ್ತವೂ ಕಡಿಮೆಯಾಗುತ್ತದೆ.

೩. **ಹೀರೇಕಾಯಿ :** ಹೀರೆ ಬೀಜ ಪುಡಿಮಾಡಿ ಮಜ್ಜಿಗೆ ಜೊತೆ ಸೇವಿಸಿದರೆ ಆಮಶಂಕೆ ನಿವಾರಣೆಯಾಗುತ್ತದೆ. ಹೀರೆಕಾಯಿ ಸೇವನೆಯಿಂದ ರಕ್ತಪಿತ್ತ ಹಾಗೂ ವಾಯುವಿನ ತೊಂದರೆ ನಿವಾರಣೆಯಾಗುತ್ತದೆ. ಚಿಕ್ಕಮಕ್ಕಳಿಗೆ ಎದೆ ನೋವು ಉಂಟಾದರೆ ಹೀರೆಕಾಯಿ ಬೇಯಿಸಿ ೧ ಚಮಚ ರಸ ತೆಗೆದು ಕುಡಿಸಿದರೆ ಎದೆ ನೋವು ಕಡಿಮೆಯಾಗುತ್ತದೆ. ಹೀರೆಕಾಯಿ ಎಲೆಗಳನ್ನು ಚೆನ್ನಾಗಿ ಅರೆದು ಗಾಯ ಉಂಟಾದಲ್ಲಿ ಹಚ್ಚಿದರೆ ಗಾಯವು ಮಾಯವಾಗುತ್ತದೆ. ಮಧುಮೇಹ ರೋಗಿಗಳಿಗೆ ಹೀರೆಕಾಯಿ ರಾಮಬಾಣವಾಗಿದೆ. ಹೀರೆಕಾಯಿ ಬೇರನ್ನು ಮೂಲವ್ಯಾಧಿಯ ಮೊಳಕೆಗಳಿಗೆ ಅರೆದು ಹಚ್ಚಿದರೆ ಅವು ನಾಶವಾಗುತ್ತವೆ.

೪. **ದೊಡ್ಡಪತ್ರೆ (ಸಂಬಾರಬಳ್ಳಿ) :** ಅಜೀರ್ಣ, ಕೆಮ್ಮು, ನೆಗಡಿಗಳಲ್ಲಿ ಇದು ಅತ್ಯುತ್ತಮ ಔಷಧ, ಅಜೀರ್ಣ, ತಲೆಸುತ್ತು, ವಾಕರಿಕೆ ಇರುವಾಗ ದೊಡ್ಡಪತ್ರೆ ಚಟ್ನಿಮಾಡಿ (ಮೆಣಸಿನಕಾಯಿ ಹಾಕದೇ) ಅನ್ನದ ಜೊತೆ ಕಲಸಿ ತಿಂದರೆ ವಾಸಿಯಾಗುತ್ತದೆ. ದೊಡ್ಡಪತ್ರೆಯ ಎಲೆಯನ್ನು ಬಿಸಿಮಾಡಿ ರಸ ತೆಗೆದು ಒಂದು ಚಮಚ ರಸಕ್ಕೆ ಒಂದು ಚಮಚ ಜೇನುತುಪ್ಪ ಸೇರಿಸಿ ದಿನಕ್ಕೆ ೩ ಬಾರಿ ಸೇವಿಸಿದರೆ ಕೆಮ್ಮು ನೆಗಡಿ ಕಡಿಮೆಯಾಗುತ್ತದೆ.

೫. **ಹೊನಗನ್ನೆ ಸೊಪ್ಪು :** ಇದು ಆಹಾರ ಜೀರ್ಣಕ್ಕೆ ಸಹಾಯಕಾರಿಯಾಗಿದೆ. ಇದನ್ನು ಸೇವಿಸುತ್ತಿದ್ದರೆ ಮಲಬದ್ಧತೆ ಆಗುವದಿಲ್ಲ. ಮೂತ್ರದ ಉರಿಯೂ ಇದರ ಸೇವನೆಯಿಂದ ಕಡಿಮೆಯಾಗುತ್ತದೆ.

೬. **ಅಮೃತಬಳ್ಳಿ :** ರಸ ಸೇವನೆಯಿಂದ ಕಾಮಾಲೆ ವಾಸಿಯಾಗುತ್ತದೆ. ಯಾವುದೇ ಜ್ವರವಿದ್ದರೂ ಇದರ ಕಷಾಯ ಸೇವನೆಯಿಂದ ವಾಸಿಯಾಗುತ್ತದೆ.

೭. **ಸೌತೇಕಾಯಿ :** ಸೌತೇಕಾಯಿ ರಸವನ್ನು ತುಸು ಹಾಲಿನೊಂದಿಗೆ ಬೆರೆಸಿ ಪ್ರತಿದಿನ ಸೇವಿಸುತ್ತ ಬಂದರೆ ಚರ್ಮದ ಕಾಂತಿಯು ಹೆಚ್ಚುತ್ತದೆ. ಹಸಿಯ ಸೌತೇಕಾಯಿಯನ್ನು

ತಿಂದರೆ ಮಧುಮೇಹರೋಗ ಕಡಿಮೆ ಆಗುತ್ತದೆ. ಸೌತೇಕಾಯಿಯ ಬಿಲ್ಲೆಗಳನ್ನು ಮುಖದ ಮೇಲೆ ಇಟ್ಟುಕೊಂಡರೆ ಸನ್‌ಬರ್ನ ಹೋಗಿಬಿಡುತ್ತದೆ. ಇದು ಸಂಧಿವಾತಕ್ಕೆ ರಾಮಬಾಣ. ದೇಹದೊಳಗಿನ ದೋಷಗಳ ನಿವಾರಣೆಗೆ ಇದು ತುಂಬ ಸಹಕಾರಿಯಾಗಿದೆ.

**೮. ಆಲೂಗಡ್ಡೆ :** ಬೆಂದ ಆಲೂಗಡ್ಡೆಯನ್ನು ಹಿಸುಕಿ ಅದಕ್ಕೆ ಹಾಲಿನ ಕೆನೆ ಮತ್ತು ಒಂದು ಚಿಟಿಕೆ ಅರಿಸಿನ ಪುಡಿ ಬೆರೆಸಿ ಮುಖ, ಕುತ್ತಿಗೆಯ ಮೇಲೆ ಹಚ್ಚಿ ೨೦ ನಿಮಿಷದ ನಂತರ ಶುದ್ಧ ನೀರಿನಿಂದ ತೊಳೆದರೆ ಮುಖದಲ್ಲಿಯ ಸುಕ್ಕು, ಕಣ್ಣುಗಳ ಸುತ್ತ ಇರುವ ಕಪ್ಪು ಕಲೆ ಮಾಯವಾಗುತ್ತದೆ.

**೯. ಶುಂಠಿ :** ಶುಂಠಿಗೆ ಬೆಲ್ಲ ಸೇರಿಸಿ ತಿಂದರೆ ಕಾಮಾಲೆ ರೋಗವು ಗುಣವಾಗುತ್ತದೆ. ಶುಂಠಿ, ನೆಲ್ಲಿ, ಸಕ್ಕರೆ ಚೂರ್ಣ ಮಾಡಿ ಸೇವಿಸಿದರೆ ಆಮ್ಲಪಿತ್ತ ನಿವಾರಣೆಯಾಗುತ್ತದೆ. ಶುಂಠಿ, ಜೀರಿಗೆ ಮತ್ತು ಸೈಂಧವಚೂರ್ಣವನ್ನು ತಾಜಾ ಮಜ್ಜಿಗೆಯಲ್ಲಿ ಹಾಕಿ ಊಟದ ನಂತರ ಸೇವಿಸಿದರೆ ಅತಿಸಾರ ವಿಕಾರ ದೂರವಾಗುತ್ತದೆ. ಶುಂಠಿಯು ಪಚನಕ್ರಿಯೆಗೆ ತುಂಬಾ ಸಹಾಯಕಾರಿ. ಶುಂಠಿ, ಸಕ್ಕರೆ ಹಾಕಿ ನೀರಲ್ಲಿ ಕುದಿಸಿ ಹಾಲು ಹಾಕಿ ಸೇವಿಸಿದರೆ ಶೀತ ಮಾಯವಾಗುತ್ತದೆ.

## ಮಸಾಲೆ ಸಾಮಾನುಗಳು :

**೧. ಮೆಂತ್ಯ (ಮೆಂತೆ) :** ಇದು ದೇಹದ ರಕ್ತದಲ್ಲಿರುವ ಕೊಲೆಸ್ಟ್ರಾಲ್ ಎಂಬ ಅಪಾಯಕಾರಿ ಕೊಬ್ಬಿನ ಅಂಶವನ್ನು ಕಡಿಮೆ ಮಾಡುತ್ತದೆ. ಹೃದಯ ರೋಗಿಗಳಿಗೆ ಇದು ಹೆಚ್ಚು ಉಪಯುಕ್ತವಾಗಿದೆ. ಮೆಂತ್ಯಕಾಳುಗಳಲ್ಲಿರುವ "ಟ್ರೈಗೋನೆಲ್ಲಿನ್" ಎಂಬ ಸಸ್ಯಕ್ಷಾರ ರಕ್ತದಲ್ಲಿರುವ ಸಕ್ಕರೆ ಪ್ರಮಾಣವನ್ನು ಕಡಿಮೆ ಮಾಡುತ್ತದೆ. ಕಾರಣ ಮಧುಮೇಹ ರೋಗಿಗಳು ಇದನ್ನು ಹೆಚ್ಚಿನ ಪ್ರಮಾಣದಲ್ಲಿ (೨೫ ಗ್ರಾಂ ದಿನಕ್ಕೆ) ಉಪಯೋಗಿಸಿದರೆ ಒಳಿತು. ಹುರಿದ ಮೆಂತ್ಯಪುಡಿಯನ್ನು ಒಂದು ಚಮಚ ಮಜ್ಜಿಗೆಗೆ ಹಾಕಿ ದಿನಕ್ಕೆರಡುಸಲ ಸೇವಿಸಿದರೆ ಭೇದಿ, ಆಮಶಂಕೆ ಹತೋಟಿಗೆ ಬರುತ್ತದೆ. ಮೆಂತ್ಯವನ್ನು ತಣ್ಣೀರಿನಲ್ಲಿ ಅರೆದು ತಲೆಗೆ ಹಚ್ಚಿಕೊಂಡರೆ ತಲೆಹೊಟ್ಟು ಮಾಯವಾಗುತ್ತದೆ. ಮೆಂತ್ಯಸೊಪ್ಪನ್ನು ತುಪ್ಪದಲ್ಲಿ ಹುರಿದು ತಿಂದರೆ ಪಿತ್ತ ಕಡಿಮೆಯಾಗುತ್ತದೆ.

**೨. ಲವಂಗ :** ಇದು ವಾತ ನಿವಾರಕವಾಗಿದೆ. ಜೀರ್ಣಶಕ್ತಿಯನ್ನು ಹೆಚ್ಚಿಸುವ ಸ್ವಭಾವ ಇದಕ್ಕಿದೆ. ಕೆಮ್ಮು, ಕಫಗಳನ್ನು ನಿವಾರಿಸುವ ಗುಣವುಳ್ಳದ್ದಾಗಿದೆ. ಹೆರಿಗೆಯ ನಂತರ ಬಾಣಂತಿಯಲ್ಲಿ ಮೊಲೆ ಹಾಲು ಕಡಿಮೆಯಾದರೆ, ಒಂದು ಟೀ ಚಮಚ ಲವಂಗದ ಕಷಾಯಕ್ಕೆ ಸ್ವಲ್ಪ ಇಂಗು ಸೇರಿಸಿ ದಿನಕ್ಕೆ ಮೂರು ಬಾರಿ ತೆಗೆದುಕೊಂಡರೆ ಮೊಲೆಹಾಲಿನ ಉತ್ಪತ್ತಿ ಹೆಚ್ಚುತ್ತದೆ.

**೩. ಜೀರಿಗೆ :** ಅಜೀರ್ಣವಾಗಿದ್ದರೆ ಜೀರ್ಣಕ್ರಿಯೆ ಸರಿ ಮಾಡಲು, ಹಸಿವಿಲ್ಲದಿದ್ದಾಗ ಹಸಿವು ಉಂಟು ಮಾಡಲು ಜೀರಿಗೆ ಶ್ರೇಷ್ಠವಾದುದು. ಬೇಸಿಗೆಯ ಬಿಸಿಲಿನ ತಾಪವನ್ನು ಹೋಗಲಾಡಿಸಲು ಉತ್ತರ ಭಾರತದ ಸಾಮಾನ್ಯ ಪಾನೀಯ "ಜಲ್‌ಜೀರಾ". ಇದರ

ಮುಖ್ಯ ಘಟಕ ಜೀರಿಗೆ. ಕೊಂಚ ಹುರಿದು ಪುಡಿ ಮಾಡಿದ ಜೀರಿಗೆಯ ಪುಡಿಯನ್ನು ಒಂದು ಲೋಟ ಮಜ್ಜಿಗೆ ಅಥವಾ ಬಿಸಿ ನೀರಲ್ಲಿ ಸೇವಿಸಬೇಕು. ಅಜೀರ್ಣವಾದಾಗ ಇದನ್ನು ಊಟದ ನಂತರ ಸೇವಿಸಬೇಕು.

**೪. ಮೆಣಸು :** ಒಂದು ಚಮಚ ಕಾಳು ಮೆಣಸಿನಪುಡಿಯನ್ನು ಒಂದು ಚಮಚ ಜೇನುತುಪ್ಪದಲ್ಲಿ ಕಲೆಸಿ ದಿನಕ್ಕೆ ಮೂರು ಬಾರಿಯಂತೆ ೫ ದಿನ ಕೊಟ್ಟರೆ ನೆಗಡಿ, ಕೆಮ್ಮು ಕಡಿಮೆಯಾಗುತ್ತದೆ. ಮೆಣಸಿನ ಕಷಾಯವು ಜ್ವರವನ್ನು ಕಡಿಮೆ ಮಾಡುತ್ತದೆ. ಜೀರ್ಣಕ್ರಿಯೆಗೆ ಇದು ಸಹಕಾರಿ. ಮೊಡವೆಗಳಿಗೆ ಮೆಣಸನ್ನು ನೀರಲ್ಲಿ ತೇದು ಹಚ್ಚುವುದರಿಂದ ಅವು ಅಲ್ಲಿಯೇ ಒಣಗಿ ಹೋಗುತ್ತವೆ. ಒಂದು ಚಿಟಿಕೆ ಮೆಣಸಿನ ಪುಡಿಯನ್ನು ಲವಂಗದ ಎಣ್ಣೆಯೊಂದಿಗೆ ಬೆರೆಸಿ ಹಲ್ಲುನೋವು ಇರುವ ಜಾಗದಲ್ಲಿ ಹಚ್ಚುವದರಿಂದ ನೋವು ಕಡಿಮೆಯಾಗುತ್ತದೆ. ಕೆಮ್ಮು, ದಮ್ಮು ಹೆಚ್ಚಾದಾಗ ಮೆಣಸನ್ನು ಬಾಯಿಯಲ್ಲಿ ಅಗೆದು ರಸವನ್ನು ನುಂಗುತ್ತ ಬಂದರೆ ತೊಂದರೆ ನಿವಾರಣೆಯಾಗುತ್ತದೆ. ಮತ್ತು ೪-೫ ಮೆಣಸಿನಕಾಳು, ೧-೨ ಹರಳು ಉಪ್ಪು ಎರಡನ್ನೂ ಒಂದು ವೀಳ್ಯದೆಲೆಯಲ್ಲಿಟ್ಟು ಅಗಿದು ತಿಂದರೆ ಕಫ ನಿವಾರಣೆಯಾಗುತ್ತದೆ.

**೫. ಇಂಗು (ಹಿಂಗು) :** ಇದು ವಾತ, ಕಫ ರೋಗ, ಜಂತುಹುಳು, ಹೊಟ್ಟೆಯುಬ್ಬರ, ಮಲಬದ್ಧತೆ, ಹೃದಯರೋಗ ನಿವಾರಕವಾಗಿದೆ. ಅಜೀರ್ಣವಾದಾಗ ಮಜ್ಜಿಗೆಯೊಂದಿಗೆ ಸೇವಿಸಿದರೆ ಗುಣವಾಗುತ್ತದೆ. ನಿಂಬೆರಸದೊಂದಿಗೆ ಇಂಗು ಸೇರಿಸಿ ಬರಿಹೊಟ್ಟೆಯಲ್ಲಿ ಸೇವಿಸಿದರೆ ಜಂತುಹುಳ ನಾಶವಾಗುತ್ತವೆ. ಚಿಕ್ಕಮಕ್ಕಳಿಗೆ ಫಿಟ್ಸರೋಗ ಬರುತ್ತಿದ್ದರೆ ಒಂದು ಗುಂಜಿ ಇಂಗನ್ನು ಎರಡು ಸಾರೆ ವೀಳ್ಯದೆಲೆ ರಸದಲ್ಲಿ ಕೊಟ್ಟಾಗ ಶಮನವಾಗುತ್ತದೆ. ಎದೆನೋವು ಬಂದಾಗ ಒಂದು ಗುಂಜಿ ಇಂಗನ್ನು ಬಿಸಿ ನೀರಿನಲ್ಲಿ (ಸಣ್ಣಲೋಟ) ಕಲಿಸಿ ಕುಡಿದರೆ ಗುಣವಾಗುತ್ತದೆ.

**೬. ಹವೀಜ (ಕೊತ್ತಂಬರಿ ಬೀಜ) :** ಗಂಟಲು ಕೆರೆತವಿದ್ದಾಗ ಕೊತ್ತಂಬರಿ ಬೀಜದ ಕಷಾಯವನ್ನು, ಶುಂಠಿಯ ಜೊತೆಗೂಡಿಸಿ ಕುಡಿದರೆ ಕಡಿಮೆಯಾಗುತ್ತದೆ. ಕೊತ್ತಂಬರಿ ಬೀಜದ ಪುಡಿಯನ್ನು ಬಿಸಿನೀರಿನಲ್ಲಿ ಬೆರೆಸಿ ಗಾಯಗಳಿಗೆ ಲೇಪಿಸಿದರೆ ಗಾಯವು ಶೀಘ್ರ ಮಾಯವಾಗುತ್ತದೆ. ದೇಹದ ಯಾವುದೇ ಭಾಗದಲ್ಲಿ ಉರಿ ಬಿದ್ದಾಗ, ಕೊತ್ತಂಬರಿ ಬೀಜವನ್ನು ರಾತ್ರಿ ಇಡೀ ನೀರಿನಲ್ಲಿ ನೆನೆಸಿಟ್ಟು ಆ ನೀರನ್ನು ಕುಡಿಯುವುದರಿಂದ ಕೂಡಲೇ ಉಪಶಮನವಾಗುತ್ತದೆ.

**೭. ಯಾಲಕ್ಕಿ (ಏಲಕ್ಕಿ) :** ಅಜೀರ್ಣವಾದಾಗ ಯಾಲಕ್ಕಿಯನ್ನು ಅಗಿದು ತಿಂದರೆ ಅಜೀರ್ಣ ಮಾಯವಾಗುತ್ತದೆ. ವಾಂತಿಯಾಗುತ್ತಿದ್ದರೆ ಒಂದು ಚಮಚ ಯಾಲಕ್ಕಿ ಪುಡಿಯನ್ನು ಜೇನುತುಪ್ಪದೊಂದಿಗೆ ಸೇವಿಸಬೇಕು. ಮೂತ್ರ ಉರಿಯುತ್ತಿದ್ದರೆ ಯಾಲಕ್ಕಿ ಪುಡಿಯನ್ನು ನೀರಲ್ಲಿ ಹಾಕಿ ಕುಡಿಯಬೇಕು. ಯಾಲಕ್ಕಿ ಬಾಯಲ್ಲಿಟ್ಟುಕೊಂಡು ರಸ ನುಂಗಿದರೆ ಒಣಕೆಮ್ಮು ಕಡಿಮೆಯಾಗುತ್ತದೆ.

**೮. ದಾಲಚಿನ್ನಿ :** ಹೊಟ್ಟೆ ನೋವಿರುವಾಗ ದಾಲಚಿನ್ನಿ ಚೂರ್ಣವನ್ನು ಮೊಸರಿನೊಡನೆ ಸೇವಿಸಿದರೆ ಗುಣವಾಗುತ್ತದೆ. ಸ್ತ್ರೀಯರಲ್ಲಿ ಮಾಸಿಕ ಸ್ರಾವವು ಸರಿಯಾಗಿ ಆಗದಿದ್ದರೆ ದಾಲಚಿನ್ನಿ ಕಷಾಯವನ್ನು ವಾರಕ್ಕೆರಡು ಬಾರಿ ಸೇವಿಸಬೇಕು ಅಂದರೆ ಗುಣವಾಗುತ್ತದೆ. ದಾಲಚಿನ್ನಿ ಕಷಾಯ ಸೇವನೆಯಿಂದ ಕೆಮ್ಮು ಗಂಟಲುನೋವು ಕಡಿಮೆಯಾಗುತ್ತದೆ. ದಾಲಚಿನ್ನಿಯನ್ನು ನೀರಲ್ಲಿ ತೇಯ್ದು ಮೊಡವೆಗಳಿಗೆ ಹಚ್ಚಿದರೆ ಅವು ಮಾಯವಾಗುತ್ತವೆ.

## ಇತರ ಆಹಾರ ಪದಾರ್ಥಗಳು :

**೧. ತೆಂಗು :** ವೈದ್ಯಶಾಸ್ತ್ರದ ಪ್ರಕಾರ ಕೊಬ್ಬರಿಯ ಹಾಲು ಮತ್ತು ಜೇನುತುಪ್ಪಗಳ ಮಿಶ್ರಣವು ಇರುಳುಗಣ್ಣು, ಚರ್ಮವ್ಯಾಧಿಗಳು, ರಕ್ತಹೀನತೆ, ಕರುಳಿಗೆ ಸಂಬಂಧಪಟ್ಟ ತೊಂದರೆಗಳನ್ನು ನಿವಾರಿಸುತ್ತದೆ. ಎಳನೀರು ಸೇವಿಸುವುದರಿಂದ ಹೃದಯದ ತೊಂದರೆಗಳು ನಿವಾರಣೆಯಾಗುತ್ತದೆ. ಎಳನೀರಿಗೆ ನಿಂಬೆಹಣ್ಣಿನ ರಸವನ್ನು ಹಿಂಡಿಕೊಂಡು ಕುಡಿದರೆ ಮೂತ್ರ ವಿಸರ್ಜನೆ ಚೆನ್ನಾಗಿ ಆಗುತ್ತದೆ. ಉರಿ ಮೂತ್ರ ರೋಗ ನಿವಾರಣೆಯಾಗುತ್ತದೆ. ಕಜ್ಜಿ, ತುರಿಕೆ ಮುಂತಾದ ರೋಗಗಳಲ್ಲಿ ಕೊಬ್ಬರಿ ಹಾಲು, ತುಳಸಿ ಮತ್ತು ಬಿಲ್ವಪತ್ರ ರಸವನ್ನು ಮಿಶ್ರಮಾಡಿ ಸೇವಿಸಿದರೆ, ಚರ್ಮದ ಮೇಲೆ ಹಚ್ಚಿದರೆ ಗುಣವಾಗುತ್ತದೆ. ಚರ್ಮರೋಗಕ್ಕೆ ಕಾಯಿಯ ಗೆರಟೆಯನ್ನು ಸುಟ್ಟು ಅದರಿಂದ ಬರುವ ಎಣ್ಣೆಯನ್ನು ಹಚ್ಚಿದರೆ (ಸುಟ್ಟು ಕಬ್ಬಿಣ / ಹಿತ್ತಾಳೆ ಪಾತ್ರೆ ಮೇಲೆ ಇಟ್ಟರೆ ಎಣ್ಣೆ ಅದಕ್ಕೆ ಹತ್ತಿಕೊಳ್ಳುತ್ತದೆ.) ಚರ್ಮರೋಗ ವಾಸಿಯಾಗುತ್ತದೆ. ತೆಂಗಿನ ಎಣ್ಣೆ ದೇಹದಲ್ಲಿ ಜೀರ್ಣಶಕ್ತಿಯನ್ನು ಉತ್ತಮಗೊಳಿಸುತ್ತದೆ. ಇದನ್ನು ಆಹಾರದಲ್ಲಿ ಹೆಚ್ಚು ಉಪಯೋಗಿಸಿದರೆ ದೇಹದ ತೂಕ ಕಡಿಮೆಯಾಗುತ್ತದೆ. ಮಧುಮೇಹ ರೋಗಿಗಳು ಇದನ್ನು ಸೇವಿಸುವದರಿಂದ ಸಕ್ಕರೆ ಅಂಶ ದೇಹದಲ್ಲಿ ಕಡಿಮೆಯಾಗುತ್ತದೆ.

**೨. ಜೇನುತುಪ್ಪ :** ಯಕೃತ್ತಿನ ತೊಂದರೆಯಿಂದ ಬಳಲುವವರಿಗೆ, ಅತ್ಯಂತ ದುರ್ಬಲರಾದವರಿಗೆ, ಚಿಕ್ಕಮಕ್ಕಳಿಗೆ (ಮಧು) ಜೇನುತುಪ್ಪ ನೆಕ್ಕಿಸುವುದರಿಂದ ಸಬಲರಾಗುತ್ತಾರೆ, ದೇಹದಲ್ಲಿ ಶಕ್ತಿ ಉಂಟಾಗುತ್ತದೆ. ಗಂಟಲಿನ ಸ್ವರ ಒಡೆದಿದ್ದರೆ ಇದನ್ನು ದಿನಾಲು ೩-೪ ಬಾರಿ ನೆಕ್ಕುತ್ತಿದ್ದರೆ ಗಂಟಲಿನ ವಿಕಾರ ದೂರವಾಗಿ ಸ್ವರವು ಮಧುರವಾಗುತ್ತದೆ. ಚರ್ಮದ ಮೇಲೆ ಹುಣ್ಣುಗಳಾದರೆ ಅದರ ಮೇಲೆ ಶುದ್ಧ ಜೇನುತುಪ್ಪ ಲೇಪಿಸಿದರೆ ಗುಣವಾಗುತ್ತವೆ. ಕೆಲವು ದಿನ ತಪ್ಪದೇ ಜೇನುತುಪ್ಪ ಸೇವಿಸಿದರೆ ಜ್ಞಾನ ತಂತುಗಳು ಚೇತನಗೊಂಡು ಮಿದುಳಿನ ದುರ್ಬಲತೆ ದೂರವಾಗುತ್ತದೆ. ಜ್ಞಾಪಕ ಶಕ್ತಿ ವೃದ್ಧಿಯಾಗುತ್ತದೆ.

**೩. ಹುಣಸಿಕಾಯಿ :** ಹುಣಸಿ ಎಲೆಯ ರಸವನ್ನು ಮತ್ತು ಸ್ತ್ರೀಯ ಹಾಲನ್ನು ಸೇರಿಸಿ ಮೂರು ತೊಲೆಯಷ್ಟು ಏಳುದಿನ ಸೇವಿಸಿದರೆ ಕಣ್ಣಲ್ಲಿ ಹೂ ಬಿದ್ದದ್ದು ಗುಣವಾಗುತ್ತದೆ. ಹುಣಸಿಗಿಡದ ಚಕ್ಕೆಯನ್ನು ಸುಟ್ಟು ಭಸ್ಮ ಮಾಡಿ ಅಡಿಕೆ ಬೆಟ್ಟದ ಪ್ರಮಾಣದಷ್ಟು ಸೇವಿಸಿದರೆ ಆಮ್ಲ ಪಿತ್ತವು ವಾಸಿಯಾಗುವದು.

೪. ನೆಲ್ಲಿಕಾಯಿ : ನೆಲ್ಲಿಕಾಯಿ ಚೂರ್ಣವನ್ನು ಆಕಳ ತುಪ್ಪದಲ್ಲಿ ಸಮ ಪ್ರಮಾಣದಲ್ಲಿ ಬೆರೆಸಿ ಸೇವಿಸಿದರೆ ಶಕ್ತಿವೃದ್ಧಿಯಾಗುತ್ತದೆ. ನೆಲ್ಲಿಕಾಯಿ ಚೂರ್ಣವನ್ನು ಜೇನುತುಪ್ಪದಲ್ಲಿ ಬೆರೆಸಿ ಸೇವಿಸಿದರೆ ವಾಂತಿಯು ನಿಂತುಹೋಗುತ್ತದೆ.

೫. ವೀಳ್ಯದೆಲೆ : ಬೆಂಕಿಯಲ್ಲಿ ಬಾಡಿಸಿದ ವೀಳ್ಯದೆಲೆಗಳನ್ನು ಎದೆ, ಗಂಟಲಿಗೆ ಒತ್ತಿಕೊಳ್ಳುವುದರಿಂದ ಎದೆಯಲ್ಲಿ ಗಟ್ಟಿಯಾದ ಕಫ ನಿವಾರಣೆಯಾಗುತ್ತದೆ. ಮಂಗನಬಾವು ಬಂದಾಗ ವೀಳ್ಯದೆಲೆ, ಸುಣ್ಣ, ಬೆಲ್ಲಗಳನ್ನು ಅರೆದು ಲೇಪಿಸಿದರೆ ಗುಣವಾಗುತ್ತದೆ. ಮಕ್ಕಳ ವಾಂತಿ ನಿವಾರಣೆಗೆ ವೀಳ್ಯದೆಲೆ ರಸ ತುಳಸಿ ರಸದಲ್ಲಿ ಒಂದು ಏಲಕ್ಕಿಕಾಳನ್ನು ಅರೆದು ನೆಕ್ಕಿಸಬೇಕು. ಕಫ ದೋಷವಿದ್ದರೆ ಏಲಕ್ಕಿಯ ಬದಲು ಮೆಣಸಿನಕಾಳು ಸೇರಿಸಬೇಕು. ಅಜೀರ್ಣ ನಿವಾರಿಸಿ ಪಚನ ಕ್ರಿಯೆ ವರ್ಧಿಸಲು ವೀಳ್ಯದೆಲೆ ಮತ್ತು ಶುಂಠಿಯ ಚೂರನ್ನು ಅಗಿದು ನುಂಗಬೇಕು. ಗಾಯವಾಗಿ ರಕ್ತಸ್ರಾವವಾಗುತ್ತಿದ್ದರೆ ಕೆಲವು ವೀಳ್ಯದೆಲೆಗಳನ್ನು ತಣ್ಣೀರಲ್ಲಿ ಅರೆದು ಲೇಪಿಸಿದರೆ ಗುಣವಾಗುತ್ತದೆ.

೬. ತುಪ್ಪ : ರೋಗನಾಶಕ ಔಷಧಿಗಳ ಜೊತೆಯಲ್ಲಿ ತುಪ್ಪ ಬೆರೆಸಿ ತೆಗೆದುಕೊಂಡಾಗ ಸಾವಿರಾರು ರೋಗಗಳು ನಾಶವಾಗುತ್ತವೆ. ಹಸುವಿನ ತುಪ್ಪವನ್ನು ಎದೆಗೆ ತಿಕ್ಕಿದಲ್ಲಿ ಮಕ್ಕಳಿಗೆ ಕಫದ ಬಾಧೆಯಿಂದ ಉಪಶಮನ ದೊರೆಯುತ್ತದೆ. ಅಂಗೈ, ಅಂಗಾಲುಗಳ ಉರಿತದ ಶಮನಕ್ಕೆ ತುಪ್ಪದ ಮರ್ದನ ಅತ್ಯಂತ ಪ್ರಶಸ್ತವಾಗಿದೆ. ೧೦ ವರ್ಷದಷ್ಟು ಹಳೆಯದಾದ ತುಪ್ಪವು ಅನೇಕ ರೋಗಗಳನ್ನು ಗುಣಪಡಿಸಬಲ್ಲದು. ಚರ್ಮರೋಗಗಳೂ ನಾಶವಾಗುತ್ತವೆ. ಸಾಂಕ್ರಾಮಿಕ ರೋಗಗಳನ್ನು ಉಂಟು ಮಾಡುವ ಸೂಕ್ಷ್ಮವಾದ ಅಣುಗಳನ್ನು ಹಳೆತುಪ್ಪ ನಾಶಮಾಡುತ್ತದೆ. ತುಪ್ಪವು ಕಣ್ಣಿಗೆ ಹಿತಕರ, ಶರೀರ ಕಾಂತಿ, ಸೌಂದರ್ಯ, ವೀರ್ಯ, ಓಜಸ್ಸು, ಬಲಗಳ ವರ್ಧಕವೂ ಆಗಿದೆ.

೭ ಬೆಲ್ಲ : ಕಬ್ಬಿನರಸದಿಂದ ತಯಾರಿಸಿದ ಬೆಲ್ಲವು ಕಫವನ್ನು ಕಡಿಮೆ ಮಾಡುತ್ತದೆ. ಬೆಲ್ಲವು ಹಳೆಯದಾದಷ್ಟು ಆರೋಗ್ಯಕ್ಕೆ ಒಳ್ಳೆಯದು. ಹೃದಯಕ್ಕೆ ಹಿತಕಾರಿ. ಕಷಾಯಗಳನ್ನು ಮಾಡಿದಾಗ ಸಕ್ಕರೆಯ ಬದಲು ಬೆಲ್ಲ ಸೇರಿಸಿದರೆ ಒಳ್ಳೆಯದಾಗುತ್ತದೆ.

೮. ಅಜವಾನ : ಹೊಟ್ಟೆನೋವು, ಹೊಟ್ಟೆಯುಬ್ಬರ ಇರುವಾಗ ಅಜವಾನದ ಪುಡಿಗೆ ಬಿಸಿನೀರು ಸೇರಿಸಿ ದಿನಕ್ಕೆ ಮೂರು ಬಾರಿ ಕುಡಿಯಬೇಕು. ಹೊಟ್ಟೆಯಲ್ಲಿ ಜಂತುಗಳಾದಾಗ ಇದರ ಪುಡಿಯನ್ನು ವೀಳ್ಯದೆಲೆರಸದೊಡನೆ ಸೇವಿಸಿದರೆ ಜಂತುಗಳು ನಾಶವಾಗುತ್ತವೆ. ಗಂಟಲು ನೋವಿದ್ದಾಗ, ಧ್ವನಿ ಒಡೆದಿದ್ದರೆ ಅಜವಾನದ ಪುಡಿಯನ್ನು ಜೇನುತುಪ್ಪದ ಜೊತೆ ಸೇವಿಸಬೇಕು. ಅಜವಾನವು ಜಠರಾಗ್ನಿಯನ್ನು ಹೆಚ್ಚಿಸಿ ಆಹಾರ ಜೀರ್ಣ ಮಾಡಲು ಸಹಕಾರಿಯಾಗುತ್ತದೆ.

೯. ಅರಿಷಿಣ : ಕಾಮಾಲೆಯಿದ್ದವರು ಅರಿಷಿಣಪುಡಿಯನ್ನು ಮಜ್ಜಿಗೆ ಇಲ್ಲವೇ ಮೊಸರಿನೊಡನೆ ಸೂರ್ಯೋದಯಕ್ಕೆ ಮುಂಚೆ ಸೇವಿಸಿದರೆ ಗುಣವಾಗುತ್ತದೆ. ಕೆಮ್ಮು ಇದ್ದರೆ ಅರಿಷಿಣಪುಡಿಯನ್ನು ಬಿಸಿಹಾಲಿನಲ್ಲಿ ಹಾಕಿ ಕುಡಿಯಬೇಕು. ಕೆಮ್ಮು ನಿಲ್ಲುತ್ತದೆ.

ಅರಿಷಿಣ ಪುಡಿಯನ್ನು ಎಣ್ಣೆಯಲ್ಲಿ ಸೇರಿಸಿ ಮೈಗೆ ಹಚ್ಚಿಕೊಂಡು ಅಭ್ಯಂಜನ ಮಾಡಿದರೆ ಶರೀರವು ಕಾಂತಿಯುಕ್ತವಾಗುತ್ತದೆ. ಗಾಯದ ಮೇಲೆ ಅರಿಷಿಣ ಪುಡಿ ಲೇಪಿಸಿದರೆ ಬೇಗ ಗುಣವಾಗುತ್ತದೆ.

೧೦. **ಮೊಸರು :** ಮೊಸರು ಆರೋಗ್ಯವನ್ನು ರಕ್ಷಿಸುವುದಲ್ಲದೇ ಮುಪ್ಪನ್ನು ಮುಂದೂಡುತ್ತದೆ. ಮಲಬದ್ಧತೆ, ಭೇದಿ, ನಿದ್ರಾಹೀನತೆ, ಕಾಮಾಲೆ ಎಲ್ಲವೂ ಮೊಸರು ಸೇವನೆಯಿಂದ ಗುಣವಾಗುತ್ತವೆ. ಮೊಸರು ಚರ್ಮವನ್ನು ಮೃದುವಾಗಿ, ಹೊಳಪಾಗಿ ಮಾಡಬಲ್ಲದು. ಕೇಶ ಆರೋಗ್ಯವನ್ನು ರಕ್ಷಿಸುತ್ತದೆ. ರಾತ್ರಿ ಮೊಸರು ತಿನ್ನಕೂಡದು.

೧೧. **ಮಜ್ಜಿಗೆ :** ನಮ್ಮ ದೇಹದಲ್ಲಿಯ ತ್ಯಾಜ್ಯವಸ್ತುಗಳನ್ನು ಹೊರಗೆ ಹಾಕಲು ಮಜ್ಜಿಗೆ ಸಹಕರಿಸುತ್ತದೆ. ಕಾರಣ ರಾತ್ರಿ ಮಜ್ಜಿಗೆಯನ್ನೇ ಸೇವಿಸಬೇಕು. ಜೀರ್ಣಕ್ರಿಯೆ ಮತ್ತು ಮೂತ್ರೋತ್ಪತ್ತಿ ಎರಡರಲ್ಲೂ ಸಹಕಾರಿಯಾಗಿದೆ. ತಲೆಹೊಟ್ಟು, ಕೂದಲು ಉದುರುವದು ಮೊದಲಾದ ಸಮಸ್ಯೆ ಇದ್ದರೆ ಮಜ್ಜಿಗೆಯ ಜೊತೆ ನೆಲ್ಲಿಚಟ್ಟು ಸೇರಿಸಿ ರಾತ್ರಿ ನೆನೆಯಿಟ್ಟು ಬೆಳಿಗ್ಗೆ ತಲೆಗೆ ಹಚ್ಚಿ ಒಂದು ಗಂಟೆಬಿಟ್ಟು ತಲೆಯನ್ನು ತೊಳೆದರೆ ಗುಣವಾಗುತ್ತದೆ. ಹಸುವಿನ ಮಜ್ಜಿಗೆ ವಾತ, ಪಿತ್ತ, ಕಫಗಳ ವಿಕೋಪವನ್ನು ನಾಶಮಾಡುತ್ತದೆ. ಜಠರಾಗ್ನಿಯನ್ನು ಉದ್ದೀಪನಗೊಳಿಸುತ್ತದೆ.

೧೨. **ತುಳಸಿ :** ಕಫ, ಜ್ವರಗಳ ನಿವಾರಣೆಗೆ ತುಳಸೀ ಕಷಾಯವನ್ನು ಮಾಡಿಕುಡಿದರೆ ಬೇಗ ಗುಣವಾಗುತ್ತದೆ. ತುಳಸಿಯು ರೋಗನಿವಾರಕ ಶಕ್ತಿಹೊಂದಿದೆ. ತುಳಸಿ ರೋಗಾಣುಗಳನ್ನು ನಾಶಪಡಿಸುವುದರಿಂದ ಇದರ ಸೇವನೆ ನಿತ್ಯದಲ್ಲಿ ಅಗತ್ಯ. ಕರುಳಿನ ಬೇನೆ, ಬಾಣಂತಿ ಉಪಚಾರಕ್ಕೆ, ಹೊಟ್ಟೆ ಹುಳುಗಳಿಗೆ ತುಳಸೀ ಎಲೆಗಳಿಂದ ಮಾಡಿದ ಔಷಧಿ ಬೇಗ ಗುಣಕಾರಿ ಎನಿಸಿದೆ. ಇದು ವಾಯುಮಾಲಿನ್ಯವನ್ನು ತಡೆಗಟ್ಟುತ್ತದೆ.

೧೩. **ಸೇಂಗಾಬೀಜ (ಕಡಲೆಕಾಯಿ) :** ಸಿಹಿಮೂತ್ರ ರೋಗಿಗಳು ದಿನವೂ ಒಂದು ಹಿಡಿ ಸೇಂಗಾಬೀಜಗಳನ್ನು ತಿಂದರೆ ಒಳ್ಳೆಯದು. ತಾಜಾ ಬೀಜಗಳನ್ನು ಸ್ವಲ್ಪ ಉಪ್ಪಿನೊಂದಿಗೆ ಅಗಿದು ತಿಂದರೆ ವಸಡುಗಳು ಗಟ್ಟಿಯಾಗುತ್ತವೆ. ಬಾಯಿ ಹುಣ್ಣು ಕಡಿಮೆಯಾಗುತ್ತದೆ. ಒಂದು ಹಿಡಿ ಹುರಿದ ಬೀಜ ಪುಡಿಮಾಡಿ, ಆಡಿನ ಹಾಲಿಗೆ ಲಿಂಬೆರಸ ಬೆರಿಸಿ ಊಟವಾದ ತಕ್ಷಣ ಕುಡಿದರೆ ಅತಿಸಾರವು ಸ್ಥಿಮಿತಕ್ಕೆ ಬರುತ್ತದೆ.

೧೪. **ಖರ್ಜೂರ್ :** ಇದು ಪಿತ್ತನಾಶಕವಾಗಿದೆ. ರಕ್ತವನ್ನು ಶುದ್ಧೀಕರಿಸಬಲ್ಲ ಸುಣ್ಣ, ಕಬ್ಬಿಣ, ಮೆಗ್ನೇಸಿಯಮ್, ರಂಜಕ ಮೊದಲಾದವು ಇದರಲ್ಲಿವೆ. ವಿಟಾಮಿನ್ ಎ, ಬಿ ಇದರಲ್ಲಿವೆ. ನಿಯಮಿತವಾಗಿ ಸೇವಿಸುವದರಿಂದ ಮಲಬದ್ಧತೆ ದೂರವಾಗುತ್ತದೆ. ಹಾಲಿನೊಂದಿಗೆ ಬೇಯಿಸಿದರೆ ಖರ್ಜೂರ ಇನ್ನೂ ರುಚಿಕರ ಹಾಗೂ ಪುಷ್ಟಿಕರ. ಇದರಿಂದ ಹೊಟ್ಟೆನೋವು ದೂರಾಗುತ್ತದೆ.

# ಗ್ರಂಥ ಋಣ


೧) ಶ್ರೀಮದ್‌ಭಾಗವತ - ಶ್ರೀ ವೇದವ್ಯಾಸರು

೨) ಶ್ರೀ ಸರ್ವಮೂಲಗ್ರಂಥಗಳು - ಶ್ರೀಮದಾನಂದತೀರ್ಥಭಗವತ್ಪಾದರು

೩) ಪಾತಿವ್ರತ್ಯದೀಪಿಕಾ - ಶ್ರೀ ಪಂ॥ ಸಗ್ರಿರಾಘವೇಂದ್ರ ಉಪಾಧ್ಯಾಯರು

೪) ಮನುಸ್ಮೃತಿ ಮತ್ತು ಸ್ತ್ರೀ - ಶ್ರೀ ಡಾ. ಕೆ. ಬಿ. ಅರ್ಚಕ

೫) ಸಾಧನ ದೀಪಿಕಾ - ಶ್ರೀ ಆ. ರಾ. ಪಂಚಮುಖಿ

೬) ಶ್ರೀ ಸ್ಕಂದ ಹಾಗೂ ಶ್ರೀ ಪದ್ಮ ಮಹಾಪುರಾಣ(ಕನ್ನಡಾನುವಾದ) - ಶ್ರೀ ಪಂ॥ ಪಂಢರೀನಾಥಾಚಾರ್ಯ ಗಲಗಲಿ

೭) ವಿವಾಹಾರ್ಥ ಪ್ರದೀಪಿಕಾ - ಶ್ರೀ ವೇ॥ ಬನವತಿ ರಾಮಕೃಷ್ಣ ಶಾಸ್ತ್ರಿಗಳು

೮) ವಿವಾಹ ದೀಪಿಕಾ - ಶ್ರೀ ವೇ॥ ಧಾಳೀ ಲಕ್ಷ್ಮೀನರಸಿಂಹ ಭಟ್ಟ

೯) ಧರ್ಮಶಾಸ್ತ್ರಕರದೀಪಿಕಾ - ಶ್ರೀ ವಿದ್ವಾನ್ ಕೆ. ಕೃಷ್ಣಜೋಯಿಸ್

೧೦) ಮನುಸುಭಾಷಿತ (ಕನ್ನಡ) - ಶ್ರೀ ಡಾ॥ ವ್ಯಾಸನಕೆರೆ ಪ್ರಭಂಜನಾಚಾರ್ಯರು

೧೧) ಶ್ರೀ ಸಾಧ್ವೀ ಸಾಧನ ಸೋಪಾನ - ಶ್ರೀ ನಾರಾಯಣಾಚಾರ್ಯ ಪೂಜಾ ಭಂಡಾರ ಪ್ರಕಾಶಿತ

೧೨) ಮಂಗಳದ್ರವ್ಯಗಳು-ಹಾಡುಗಳು - ಶ್ರೀ ವಿದ್ವಾನ್ ಕೆ. ಎಲ್. ಪುಷ್ಕರಾಚಾರ್ಯ

೧೩) ಧರ್ಮಸಿಂಧು (ಕನ್ನಡಾನುವಾದ) - ಶ್ರೀ ಶಂಭುಶರ್ಮಾ ನಾಜಗಾರ

೧೪) The Hindu Marriage - Sri H. K. S. Rao

೧೫) ಧರ್ಮಸಂದೇಶ-ಸಂಚಿಕೆಗಳು - ಶ್ರೀ ಪಂ॥ ಪ್ರಲ್ಹಾದಾಚಾರ್ಯ ನಾಗರಳ್ಳಿ

೧೬) ಸಾರ್ಥಷೋಡಶ ಸಂಸ್ಕಾರ ರತ್ನಮಾಲಾ - ಶ್ರೀ ಪೆರ್ಲ ಕೃಷ್ಣಭಟ್ಟ

೧೭) ತರಂಗ ವಾರಪತ್ರಿಕೆ - ಶ್ರೀಮತಿ ಸಂಧ್ಯಾ ಪೈ

೧೮) ಯಾಜ್ಞವಲ್ಕ್ಯಸ್ಮೃತಿ (ಕನ್ನಡಾನುವಾದ) - ಶ್ರೀ ನಾಗೇಶ ರಂಗೋ ಕುಲಕರ್ಣಿ

೧೯) ಪರಾಶರಸ್ಮೃತಿ (ಕನ್ನಡಾನುವಾದ) - ಶ್ರೀ ವಿದ್ವಾನ್ ಈಶ್ವರಶಾಸ್ತ್ರೀ

೨೦) ವಿವಾಹ ಪ್ರಯೋಗ (ಸಂಸ್ಕೃತ) - ಶ್ರೀ ಶ್ರೀನಿವಾಸಾಚಾರ್ಯ ಹೊಂಬಾಳಿ

೨೧) ವಿಚಾರ ಜ್ಯೋತಿ - ಶ್ರೀ ಪ್ರೊ॥ ಕೆ. ಟಿ. ಪಾಂಡುರಂಗಿ